# ಶಕುನ ಮತ್ತು ಸ್ವಪ್ನ ಫಲ

ಗಜಾನನ ಪ್ರಕಾಶನ, ಮಂಗಳೂರು-





# ಫಲದೀಪಿಕಾ

## ಪ್ರಥಮ ಭಾಗ

ಮಂತ್ರೇಶ್ವರಮುನಿ ಪ್ರಣೀತ ಫಲಜ್ಯೋತಿಷ ಗ್ರಂಥದ ಪ್ರಥಮ ೧೩. ಅಧ್ಯಾಯಗಳ ಭಾವಾನುವಾದ, 1. ಸಂಜ್ಞಾಧ್ಯಾಯ, 2. ಕಾರಕಾಧ್ಯಾಯ, 3. ವರ್ಗಸಂಜ್ಞಾಧ್ಯಾಯ 4. ಷಡ್ಬಲ, 5. ಕರ್ಮಾಜೀವ, 6. ಯೋಗವಿಚಾರ, 7. ರಾಜಯೋಗ, 8. ಭಾವಸ್ಥಿತ ಗ್ರಹಫಲ, 9. ಲಗ್ನಫಲ, 10. ಕಳತ್ರಭಾವ, 11. ಸ್ತ್ರೀಜಾತಕ, 12. ಸಂತಾನ ಚಿಂತೆ, 13. ಆಯುರ್ಭಾವ, ಮೊದಲಾದ ವಿಚಾರಗಳನ್ನು ಆಧಾರಶ್ಲೋಕ ಮತ್ತು ಟಿಪ್ಪಣಿಯಿಂದ ವಿವರಿಸಿ ಬರೆದಿರುತ್ತದೆ. ಉತ್ತಮ ಫಲಜ್ಯೋತಿಷ ಗ್ರಂಥ.

ಪುಟ 147 ಬೆಲೆ ರೂ. 13.00

# ಫಲದೀಪಿಕಾ

## ದ್ವಿತೀಯಭಾಗ

ಅಧ್ಯಾಯ 14. ರೋಗ, ಮರಣ, ಪೂರ್ವ-ಭವಿಷ್ಯ ಜನ್ಮಚಿಂತೆ, 15. ಭಾವ ಚಿಂತೆ, 16. ಲಗ್ನಾದಿ ದ್ವಾದಶ ಭಾವಫಲ, 17. ನಿರ್ಯಾಣ ಪ್ರಕರಣ, 18. ದ್ವಿಗ್ರಹಯೋಗ, 19. ದಶಾಫಲ, 20. ದಶಾಭುಕ್ತಿ ಫಲ. 21. ಭುಕ್ತಿ-ಅಂತರ್ಭುಕ್ತಿ ಫಲ, 22. ಕಾಲಚಕ್ರದಶೆ, 23. ಅಷ್ಟಕವರ್ಗ, 24. ಹೋರಾಸಾರೋಕ್ತ ಅಷ್ಟಕವರ್ಗ, 25. ಪ್ರವ್ರಜ್ಯಾಯೋಗ ಮೊದಲಾದ ವಿಚಾರಗಳನ್ನು ಆಧಾರಶ್ಲೋಕ ಮತ್ತು ಟಿಪ್ಪಣಿಯಿಂದ ಭಾವಾನುವಾದವನ್ನು ವಿವರಿಸಿ ಬರೆದಿರುತ್ತದೆ. ಫಲಜ್ಯೋತಿಷದ ಅದ್ವಿತೀಯ ಗ್ರಂಥ.

ಪುಟ 127 ಬೆಲೆ ರೂ. 14.00

# ಶಕುನ ಮತ್ತು ಸ್ವಪ್ನ ಫಲ

ಪ್ರಶ್ನಮಾರ್ಗ ಅಧ್ಯಾಯ ೩, ೪ ಮತ್ತು ೧೦

ಅನುವಾದಕರು.

ಬಿ. ಜಿ. ಆಚಾರ್ಯ

1984

ಬೆಲೆ ರೂ. 8-00

**SHAKUNA & SWAPNA PHALA**

**ಶಕುನ ಮತ್ತು ಸ್ವಪ್ನಫಲ**

An Collection & Translation from **Prashna** Marg & other astrological Books on OMENS & DREAMS P. P. 112+X.



ಬೆಲೆ ರೂ. 8-00

ಪ್ರಥಮ ಮುದ್ರಣ 1984

ಪ್ರಕಾಶಕರು: **ಗಜಾನನ ಪ್ರಕಾಶನ**
ಗಣಪತಿ ಹೈಸ್ಕೂಲ್ ಕ್ರಾಸ್ ರೋಡ್, ಮಂಗಳೂರು-1

ಮುದ್ರಕರು: **ಕಾಮಧೇನು ಪ್ರಿಂಟರ್ಸ್**
ಗಣಪತಿ ಹೈಸ್ಕೂಲ್ ಕ್ರಾಸ್ ರೋಡ್, ಮಂಗಳೂರು-1

# ಅನುಕ್ರಮಣಿಕೆ

## ಬೃಹತ್ ಸಂಹಿತಾ-ಅಂಗ ಲಕ್ಷಣ.



॥ ಶ್ರೀ ಗಣೇಶಾಯ ನಮಃ ॥

ಆಧಾರೇ ಪ್ರಥಮಂ ಸಹಸ್ರಕಿರಣಂ ತಾರಾಧಿಪಂ ಸ್ವಾಲಯೇ ।
ಮಾಹೇಯಂ ಮಣಿಪೂರಕೇ ಹೃದಿಬುಧವರ್ ಕಂಠೇಚ ವಾಚಸ್ಪತಿವರ್ ।
ಭ್ರೂಮಧ್ಯೇ ಭೃಗುನಂದನಂ ದಿನಮಣೇಃ ಪುತ್ರಂ ತ್ರಿಕೂಟಸ್ಥಲೇ ।
ನಾಡೀಮರ್ಮಸು ರಾಹುಕೇತು ಗುಳಿಕಾನ್ ನಿತ್ಯಂ ನಮಾಮ್ಯಾಯುಷೇ ।

# ಪೀಠಿಕೆ

## ಶಕುನ ವಿಚಾರ

ಜ್ಯೋತಿಷಶಾಸ್ತ್ರವು ಜಾತಕನ ಪ್ರಾರಬ್ಧಕರ್ಮಫಲವನ್ನು ಸೂಚಿಸುತ್ತದೆ. ಜನ್ಮ ಜಾತಕದಲ್ಲಿ ಉತ್ತಮಯೋಗಗಳಿದ್ದರೂ, ಕೆಲವೊಮ್ಮೆ ತಾತ್ಕಾಲಿಕ ಸಮಸ್ಯೆಗಳಿಂದ ಪೀಡಿತ ಜಾತಕನಿಗೆ ತನ್ನ ಸಮಸ್ಯೆಯ ಸೂಕ್ತ ಪರಿಹಾರ ನೀಡಲು ಪ್ರಶ್ನ ಶಾಸ್ತ್ರವು ಉಪಯುಕ್ತ ಆಗಿರುತ್ತದೆ. ಪ್ರಶ್ನಶಾಸ್ತ್ರದ ಆಧಾರದಿಂದ ಫಲ ಹೇಳಲು ಆ ಕಾಲದಲ್ಲಿ ಸಂಭವಿಸುವ ಶಕುನಗಳು ಫಲಾಫಲ ವಿವೇಚನೆಗೆ ಉಪಯುಕ್ತ ಆಗಿರುತ್ತವೆ. ಶುಭ ಶಕುನಗಳು ಕಾರ್ಯಸಿದ್ಧಿಯನ್ನು, ಅಶುಭ ಶಕುನಗಳು ಕಾರ್ಯಹಾನಿಯನ್ನು ಸೂಚಿಸುತ್ತವೆ. ಅದೇ ರೀತಿ ಅಂಗಸ್ಫುರಣ, ಪೃಚ್ಛಕನು ಮಾಡುವ ಚೇಷ್ಟೆಗಳು, ನಿಲ್ಲುವ ದಿಕ್ಕು, ಪ್ರಶ್ನಕಾಲದಲ್ಲಿ ಹೇಳಲ್ಪಡುವ ಅಥವಾ ಕೇಳಲ್ಪಡುವ ಮಾತುಗಳು, ನೋಡಲ್ಪಡುವ ದೃಶ್ಯ ಅಥವಾ ವಸ್ತುಗಳು, ಆ ಕಾಲದಲ್ಲಿ ಉಪಸ್ಥಿತ ಅಥವಾ ಆಗಮಿಸಿದ ವ್ಯಕ್ತಿ ಅಥವಾ ಜೀವ-ಜಂತುಗಳು, ಅವರ ಚೇಷ್ಟೆ ಇತ್ಯಾದಿ ಅಂಗ ಲಕ್ಷಣ, ಇವೇ ಮೊದಲಾದವು ಪ್ರಶ್ನಫಲ ನಿರ್ಣಯಕ್ಕೆ ಸಹಾಯಕ ಹಾಗೂ ಉಪಯುಕ್ತ ಆಗಿರುತ್ತದೆ.

ಅಷ್ಟಮಂಗಲ ಪ್ರಶ್ನೆಯನ್ನು ಇಡಲು ಹೋಗುವಾಗ ದೈವಜ್ಞನಿಗೆ ದಾರಿಯಲ್ಲಿ ಸಂಭವಿಸುವ ಘಟನೆಗಳು, ಪ್ರಚ್ಛಕನ ಗೃಹಪ್ರವೇಶ ಕಾಲದಲ್ಲಿ ಸಂಭವಿಸುವ ನಿಮಿತ್ತಗಳು, ಪ್ರಶ್ನಭೂಮಿ, ಆ ಕಾಲದ ಲಕ್ಷಣಗಳು, ದೀಪಲಕ್ಷಣ ಇತ್ಯಾದಿ ಫಲನಿರ್ಣಯಕ್ಕೆ ಉಪಯುಕ್ತ ಆಗಿರುತ್ತದೆ.

**ಅನ್ಯಜನ್ಮಾಂತರಕೃತಂ ಶುಭಂ ವಾ ಯದಿ ವಾ ಶುಭಮ್ ।**
**ಯತ್ತಸ್ಯ ಶಕುನಃ ಪಾಕಂ ನಿವೇದಯತಿ ಗಚ್ಛತಾಮ್ ॥**

ಹಿಂದಿನ ಜನ್ಮಗಳಲ್ಲಿ ಮಾಡಿದ ಶುಭಾಶುಭ ಕರ್ಮಫಲಗಳು ಶಕುನ ರೂಪವಾಗಿ ದಾರಿಯಲ್ಲಿ ಹೋಗುವಾಗ ಕಂಡು ಬರುತ್ತವೆ. ಶಕುನಗಳು ಆಗಾಮಿ ಫಲ ಸೂಚಕ ಆಗಿರುತ್ತವೆ. ಪ್ರಶ್ನಮಾರ್ಗ ಗ್ರಂಥದ ಮೂರನೇ ಮತ್ತು ನಾಲ್ಕನೇ ಅಧ್ಯಾಯಗಳಲ್ಲಿ ಶಕುನ ಮತ್ತು ಅವುಗಳು ಸೂಚಿಸುವ ಫಲಗಳನ್ನು ಬರೆದಿರುತ್ತದೆ. ಈ ಗ್ರಂಥದಲ್ಲಿ ದೈವಜ್ಞರಿಗೆ ಉಪಯುಕ್ತ ಆಗುವಂತೆ ಅವುಗಳನ್ನು ಮತ್ತು ಎರಡನೇ ಮತ್ತು ಇಪ್ಪತ್ತನೇ ಅಧ್ಯಾಯದ ಕೆಲವು ಶ್ಲೋಕಗಳನ್ನು, ವರಾಹ ಮಿಹಿರರ ಬೃಹತ್-ಸಂಹಿತಾ ಗ್ರಂಥದ ಅಂಗಲಕ್ಷಣ ಅಧ್ಯಾಯ, ಇವುಗಳ ಮೂಲಶ್ಲೋಕ ಮತ್ತು ಅದರ ಭಾವಾನುವಾದವನ್ನು ಬರೆದಿರುತ್ತದೆ.

## ಸ್ವಪ್ನಫಲ ವಿಚಾರ

ಭಾವೀ ಜೀವನದಲ್ಲಿ ಸಂಭವಿಸಬಹುದಾದ ಕೆಲವೊಂದು ಪ್ರಮುಖ ಘಟನೆಗಳು ಪೂರ್ವಸೂಚಿತವಾಗಿ ಕನಸಿನಲ್ಲಿ ಕಂಡು ಬರುತ್ತದೆ. ಶಕುನಗಳನ್ನು ಆಧರಿಸಿ ಆಗಾಮಿ ಶುಭಾಶುಭ ಫಲ ನಿರ್ಣಯಿಸುವಂತೆ, ಕನಸಿನಲ್ಲಿ ಕಂಡ ವಸ್ತು, ಜೀವ-ಜಂತುಗಳು, ಶುಭಾಶುಭ ಘಟನೆಗಳು, ಮೊದಲಾದ ದೃಶ್ಯಗಳು ಮುಂದಕ್ಕೆ ಸಂಭವಿಸ ಬಹುದಾದ ಘಟನೆಗಳನ್ನು ಸೂಚಿಸುತ್ತದೆ. ಕನಸಿನಲ್ಲಿ ಕಂಡ ಸಕಲ ವಸ್ತುಸ್ಥಿತಿಯು, ತುಲ್ಯ ಆಗಾಮಿ ಸುಖ-ದುಃಖ ಸೂಚಕ ಆಗಿರುತ್ತದೆ. ಯಾವ ಸ್ವಪ್ನವು ದರ್ಶನಕಾಲದಲ್ಲಿ ಸುಖವನ್ನು ನೀಡುತ್ತದೋ ಅದು ಭಾವೀ ಶ್ರೇಯಸ್ಸಿನ ಸೂಚನೆ ನೀಡುತ್ತದೆ. ಇದು ಸುಸ್ವಪ್ನ ಆಗುತ್ತದೆ. ವಿಪರೀತವಾದ್ದಲ್ಲಿ ಅದು ದುಃಸ್ವಪ್ನ ಆಗುತ್ತದೆ.

ದೈವಜ್ಞನು ಕನಸಿನ ವಿಚಾರ ಪ್ರಶ್ನೆಫಲ ನಿರ್ಣಯಿಸಲು ಪ್ರಶ್ನಕಾಲದ ಗ್ರಹರಿಂದ ಸೂಚಿತಫಲ ವಿವೇಚನೆ ಮಾಡಬೇಕು. ಸಾಮಾನ್ಯವಾಗಿ ಪ್ರಶ್ನ ಲಗ್ನಸ್ಥಿತಗ್ರಹನು ಪೃಚ್ಛಕನು ಕಂಡ ಕನಸಿನ ಫಲ ಸೂಚಕನು ಆಗಿರುತ್ತಾನೆ.

"ಲಗ್ನಾಂಶಗೇsರ್ಕೇ ತನುಗೇಪಿ ವಾsಸ್ಮಿನ್ ದುಸ್ವಪ್ನಮೀಕ್ಷೇತ ಯಥಾsರ್ಕಬಿಂಬಮ್ । ರಕ್ತಾಂಬರಂ ವಹ್ನಿಮಥಾಪಿ" ಪ್ರಶ್ನಲಗ್ನ ನವಾಂಶ ರಾಶಿಯಲ್ಲಿ ರವಿ ಇದ್ದರೆ ಅಥವಾ ಪ್ರಶ್ನಲಗ್ನದಲ್ಲಿ ರವಿ ಇದ್ದರೆ ಪೃಚ್ಛಕನು ದುಃಸ್ವಪ್ನವನ್ನು ನೋಡಿರುತ್ತಾನೆ ಎಂದು ತಿಳಿಯಬೇಕು. ಆತನು ಸ್ವಪ್ನದಲ್ಲಿ ಸೂರ್ಯಬಿಂಬ, ರಕ್ತವಸ್ತ್ರ ಅಥವಾ ಬೆಂಕಿಯನ್ನು ನೋಡಿರುತ್ತಾನೆ.

"ಚಂದ್ರೇ ಶುಭ್ರಾsಶ್ವರತ್ನಾಂಬರ ಪುಷ್ಪ ವಜ್ರಮ್ ॥ಸ್ತ್ರಿಯಃ ಸುರೂಪಾಶ್ಚ" ಪ್ರಶ್ನಲಗ್ನ ನವಾಂಶರಾಶಿ ಅಥವಾ ಪ್ರಶ್ನಲಗ್ನದಲ್ಲಿ ಚಂದ್ರನಿದ್ದರೆ ಪೃಚ್ಛಕನು ಕನಸಿನಲ್ಲಿ ಬಿಳಿ ಕುದುರೆ, ರತ್ನ, ಬಿಳಿಬಟ್ಟೆ, ಪುಷ್ಪ, ವಜ್ರ ಮತ್ತು ರೂಪವಂತಳಾದ ಸ್ತ್ರೀಯನ್ನು ನೋಡಿರುತ್ತಾನೆ.

"ಕುಜೇ ಸುವರ್ಣರಕ್ತಾಂಬರಪ್ರಜ್‌ಮಣಿವಿದ್ರುಮಾಣಿ ।" ಪ್ರಶ್ನಲಗ್ನ ನವಾಂಶರಾಶಿ ಅಥವಾ ಪ್ರಶ್ನಲಗ್ನದಲ್ಲಿ ಕುಜನಿದ್ದರೆ ಪೃಚ್ಛಕನು ಕನಸಿನಲ್ಲಿ ಬಂಗಾರ, ರಕ್ತವರ್ಣದ ವಸ್ತ್ರ, ಕೆಂಪು ಮಾಲೆ, ಮಣಿ, ಹವಳ ನೋಡಿರುತ್ತಾನೆ.

"ಬುಧೇ ಹಯಸ್ವರ್ಗತಿಧರ್ಮವಾರ್ತಾ" ಪ್ರಶ್ನಲಗ್ನ ನವಾಂಶ ರಾಶಿ ಅಥವಾ ಪ್ರಶ್ನಲಗ್ನದಲ್ಲಿ ಬುಧನಿದ್ದರೆ ಪೃಚ್ಛಕನು ಕನಸಿನಲ್ಲಿ ಕುದುರೆ ಅಥವಾ ಕುದುರೆ ಸವಾರಿ ಮಾಡುವುದು, ಆಕಾಶಯಾನ, ಧಾರ್ಮಿಕ ವಿಚಾರ ಮಾತು ಹರಿಕಥೆ, ಪ್ರವಚನ ಇತ್ಯಾದಿ ಕೇಳಿರುತ್ತಾನೆ.

**"ಗುರೌ ರತಿರ್ಧರ್ಮಕಥಾ ಸುರೇಜ್ಯಾ ॥ ಸದ್ಬಂಧುಸಙ್ಗಶ್ಚ"** ಪ್ರಶ್ನಲಗ್ನ ನವಾಂಶರಾಶಿ ಅಥವಾ ಪ್ರಶ್ನಲಗ್ನದಲ್ಲಿ ಗುರು ಇದ್ದರೆ ಪೃಚ್ಛಕನಿಗೆ ಕನಸಿನಲ್ಲಿ ಸ್ತ್ರೀಸಂಗ, ಧಾರ್ಮಿಕ ಕಥೆ ಶ್ರವಣ, ದೇವದರ್ಶನ, ಬಂಧು-ಬಾಂಧವರೊಂದಿಗೆ ಮಿಲನ ಆಗಿರುತ್ತದೆ.

**"ಸಿತೇ ಜಲಾನಾಂ ಪಾರೇಗತಿರ್ದೇವರತಿವಿಲಾಸಃ ।** ಪ್ರಶ್ನಲಗ್ನ ನವಾಂಶ ರಾಶಿ ಅಥವಾ ಪ್ರಶ್ನಲಗ್ನದಲ್ಲಿ ಶುಕ್ರನಿದ್ದರೆ ಪೃಚ್ಛಕನಿಗೆ ಕನಸಿನಲ್ಲಿ ನದಿಯನ್ನು ದಾಟುವುದು, ದೇವತಾಭಕ್ತಿ, ಕ್ರೀಡೆಯಿಂದ ಆನಂದ ಆಗಿರುತ್ತದೆ.

**"ಶನೌವರಕ್ಯಾದ್ರಿಗತಿಶ್ಚ ನೀಚೈಃ ಸಙ್ಗಶ್ಚ ರಾಹೌ ಶಿಖಿನೀತ್ಥಮೇವ"** ಪ್ರಶ್ನಲಗ್ನ ನವಾಂಶ ಅಥವಾ ಪ್ರಶ್ನಲಗ್ನದಲ್ಲಿ ಶನಿ ಇದ್ದರೆ ಪೃಚ್ಛಕನು ಕನಸಿನಲ್ಲಿ ವನ, ಪರ್ವತ ಆದಿ ಸಂಚರಿಸುತ್ತಾನೆ. ನೀಚ ಜನರ ಸಹವಾಸ ಮಾಡಿರುತ್ತಾನೆ. ರಾಹು-ಕೇತುಗಳು ಶನಿಯಂತೆ ಕನಸಿನ ಫಲ ನೀಡುತ್ತಾನೆ.

ತಾತ್ಕಾಲಿಕ ಗ್ರಹಸ್ಥಿತಿಯಿಂದ ಸ್ವಪ್ನಫಲ ಚಿಂತನೆಗೆ ಉಪಯುಕ್ತ ಆಗುವಂತೆ ಪ್ರಶ್ನಮಾರ್ಗ ಗ್ರಂಥದ ೩೧ನೇ ಅಧ್ಯಾಯದಲ್ಲಿ ಹೇಳಿದ ಸ್ವಪ್ನಫಲ ವಿಚಾರ, ಅಷ್ಟಾಂಗ ಹೃದಯ, ಸುಶ್ರುತ ಸಂಹಿತಾ, ಕಾಲಪ್ರಕಾಶಿಕಾ ಗ್ರಂಥಗಳಿಂದ ಆಯ್ದ ಶ್ಲೋಕಗಳ ಭಾವಾನುವಾದವನ್ನು ದುಸ್ವಪ್ನ ಸುಸ್ವಪ್ನಗಳ ಫಲ ಚಿಂತನೆಯನ್ನು ಈ ಗ್ರಂಥದಲ್ಲಿ ವಿದ್ಯಾರ್ಥಿಗಳಿಗೆ ಉಪಯುಕ್ತ ಆಗುವಂತೆ ಬರೆದಿರುತ್ತದೆ.

ಈ ಗ್ರಂಥದ ಅನುವಾದಕ್ಕೆ ಅಮೂಲ್ಯ ಸಲಹೆಗಳನ್ನಿತ್ತ ನನ್ನ ಮಿತ್ರ ಹಾಗೂ ಹಿತಚಿಂತಕರಾದ **ವೇದಮೂರ್ತಿ ಪುಂಡಲೀಕ ಅನಂತ ಭಟ್** ಮತ್ತು **ಶ್ರೀ ವಾಸುದೇವ ಕಾಮತ್** ರವರಿಗೆ ನಾನು ಉಪಕೃತನಾಗಿದ್ದೇನೆ.

ಈ ಗ್ರಂಥಾನುವಾದದಲ್ಲಿ ಲೋಪದೋಷಗಳು ಕಂಡು ಬಂದಲ್ಲಿ ಇದನ್ನು ವಾಚಕರು ಕ್ಷಮಿಸಬೇಕಾಗಿ ಕೇಳಿ ಕೊಂಡು ನನ್ನ ಈ ಪೀಠಿಕೆಯನ್ನು ಕೊನೆಗಾಣಿಸುತ್ತೇನೆ.

ಈ ಚಿಕ್ಕ ಗ್ರಂಥವು ವಿದ್ಯಾರ್ಥಿಗಳಿಗೆ, ವಾಚಕರಿಗೆ ಮತ್ತು ಗ್ರಂಥಾಲಯಗಳಿಗೆ ಉಪಯುಕ್ತವಾಗಿ ಲೋಕ ಪ್ರೇಮವನ್ನು ಗಳಿಸಲಿ ಎಂದು ಹಾರೈಸುವ.

26-9-1984 ತಮ್ಮೆಲ್ಲರ ಹಿತೇಚ್ಛು

ಮಂಗಳೂರು. **ಬಿ. ಜಿ. ಆಚಾರ್ಯ**

# ತಿದ್ದುಪಡಿ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 9 | ಹೊರೆ | ಹೋರೆ |
| 2 | 17 | ವ್ಯತ್ಕ್ಯವು | ವ್ಯತ್ಯವು |
| 3 | 2 | ಕತೃ | ಕರ್ತೃ |
| 3 | 9 | ಶುಕುನವು | ಶಕುನವು |
| 8 | 4 | ಶೃಗಾಲ | ಸೃಗಾಲ |
| 10 | 4 | ಪ್ರೀವಶಿಸುವ | ಪ್ರವೇಶಿಸುವ |
| 14 | 9 | ಅಭಿಷ್ಟವು | ಅಭೀಷ್ಟವು |
| 32 | 3 | ಅಭಿಷ್ಟಗಳು | ಅಭೀಷ್ಟಗಳು |
| 44 | 21 | ಸ್ತ್ರಿ | ಸ್ತ್ರೀ |
| 56 | 10 | ಆದ್ರಾ | ಆರ್ದ್ರಾ |
| 60 | 10 | ದೀಪ್ತಾಗ್ನಿ | ದೀಪ್ತೋಗ್ನಿ |
| 61 | 22 | ಸ್ತ್ರಾವಾದಿ | ವರ್ಣೋಥ |
| 62 | 14 | ಮಧ್ಯಪಾನ | ಮದ್ಯಪಾನ |
| 63 | 4 | ನೇಹಂ | ಸ್ನೇಹಂ |
| 63 | 11 | ಕೋಡುಶ್ತಾನೋ: | ಕೊಡುತ್ತಾನೋ: |
| 63 | 24 | ಶೃಗಾಲ್ಯೆ | ಸೃಗಾಲ್ಯೆ |
| 64 | 15 | ಮಿಸಾಂಘ್ರ | ಏಳಾಂಧ್ರ |
| 65 | 3 | ಕೇಸರು | ಕೆಸರು |
| 65 | 15 | ಉಪದ್ಮ್ಯಗ | ಉಪಾನದ್ಮ್ಯಗ |
| 66 | 14 | ನೇಶ್ಯತೆ | ನೇಶ್ಯತೇ |
| 69 | 2 | ದದಿವ್ | ದಧಿವ್ |
| 70 | 4 | ವರ್ಷಾದಿ | ತರ್ವಾದಿ |
| 70 | 19 | ಭರನ್ಮಾಥವ | ಶರನ್ಮಾಥವ |
| 71 | 2 | ಭರಾತೇ: | ಭಟಾರೇ: |
| 71 | 24 | ಭೀಭತ್ಸ್ಯ | ಭೀಭತ್ಸ |
| 72 | 18 | ಪಾಕಾ | ವರ್ಷಪಾದಾ |
| 73 | 19 | ಜ್ಞಪವಾ | ಏಪವಾ |

॥ ಶ್ರೀ ಗಣೇಶಾಯ ನಮಃ ॥

# ಪ್ರಶ್ನಮಾರ್ಗ ಅಧ್ಯಾಯ ಮೂರು

## ಶುಭಾಶುಭ ಶಕುನ

**ಪ್ರಶ್ನಕಾಲೋದ್ಭವಂ ಬುಧ್ವಾ ಸದಸತ್ಸಮಯಾದಿಕಮ್ ।**
**ನಿರ್ಗಚ್ಛೇತ್ಸಮಯೇ ಜೀವಕಾಲಹೋರಾದಿಕೇ ಶುಭೇ ॥೧॥**

ಜ್ಯೋತಿಷ್ಯನು ಪ್ರಶ್ನೆ ಇಡಲು ಹಾಗೂ ತಾತ್ಕಾಲಿಕ ಪ್ರಶ್ನೆಯಿಂದ ಸಂಭವಿಸುವ ಫಲಾಫಲ ಹೇಳಲು ಪ್ರಚ್ಛಕನ ಮನೆಗೆ ಹೋಗುವಾಗ ದಾರಿಯಲ್ಲಿ ಸಂಭವಿಸುವ ಶಕುನಗಳನ್ನು ಆಧರಿಸಿ, ಅವುಗಳಿಂದ ಸೂಚಿತ ಶುಭಾಶುಭಫಲಗಳನ್ನು ತಿಳಿಯಬೇಕು. ಗುರುವಿನ ಹೊರೆ ಅಥವಾ ಶುಭಗ್ರಹನ ಹೋರೆಯಲ್ಲಿ ಪ್ರಶ್ನೆಯ ಫಲ ಹೇಳಲು ಪ್ರಚ್ಛಕನ ಮನೆಗೆ ಹೊರಡಬೇಕು.

ಜ್ಯೋತಿಷ್ಯನು ಅಷ್ಟಮಂಗಲ ಪ್ರಶ್ನೆ ಇಡಲು ಹೊರಡುವ ಕಾಲದಲ್ಲಿ ಅಥವಾ ಪ್ರಚ್ಛಕನ ಮನೆಗೆ ಹೋಗುವಾಗ ದಾರಿಯಲ್ಲಿ ಅಥವಾ ಪ್ರಶ್ನಕಾಲದಲ್ಲಿ ಸಂಭವಿಸುವ ಶುಭಾಶುಭ ಶಕುನ ಫಲಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾನೆ. ಹೋರಾ ಅಂದರೆ ದಿನದ 24ನೇ ಒಂದು ಭಾಗ. ಸೂರ್ಯೋದಯದಿಂದ ಮರುದಿನ ಸೂರ್ಯೋದಯದ ವರೆಗೆ ಒಂದುದಿನ ಆಗಿರುತ್ತದೆ. ಆಯಾದಿನದ ಅಧಿಪತಿಯೇ ಮೊದಲನೇ ಹೋರಾದಿಪ. ಅನಂತರದ ಹೋರೆಗಳಿಗೆ ಒಂದು ಗ್ರಹ ಬಿಟ್ಟು ಇನ್ನೊಂದು ಗ್ರಹವು ವ್ಯತ್ಯಯವಾದ ಕ್ರಮದಲ್ಲಿ ಹೋರಾ ಅಧಿಪತಿಗಳು ಆಗುತ್ತಾರೆ. ಗುರುವಾರ ಮೊದಲನೇ, 8ನೇ, 15ನೇ ಮತ್ತು 22ನೇ ಹೋರೆಯು ಗುರುವಿನದ್ದು ಆಗಿರುತ್ತದೆ. ಅದೇ ರೀತಿ ಇತರ ದಿನಗಳ ಹೋರೆಯನ್ನು ಶೋಧಿಸಬೇಕು. ಗುರುವಿನ ಹೋರೆಯಲ್ಲಿ ಪ್ರಶ್ನೆ ಹೇಳಲು ಹೊರಡುವುದು ಉತ್ತಮ. ಅನಂತರ ಉಳಿದ ಶುಭಗ್ರಹಗಳ (ಬುಧ, ಶುಕ್ರ ಮತ್ತು ಚಂದ್ರ) ಹೋರೆಯು ಕೂಡಾ ಶುಭಫಲದಾಯಕ ಆಗುತ್ತದೆ.

**ಶುಭಾಶುಭ ನಿಮಿತ್ತಂ ಯತ್ಪ್ರಶ್ನಕಾಲಸಮುದ್ಭವಮ್ ।**
**ಉಕ್ತಂ ನಿಖಿಲಮಪ್ಯೇತಚ್ಚಿಂತನೀಯಂ ಹಿ ನಿರ್ಗಮೇ ॥೨॥**

ಪ್ರಶ್ನಕಾಲದಲ್ಲಿ ಸಂಭವಿಸುವ ಶುಭಾಶುಭ ಶಕುನಗಳನ್ನು ಹಿಂದಿನ ಅಧ್ಯಾಯದಲ್ಲಿ ಹೇಳಿರುತ್ತದೆ. ಅವುಗಳನ್ನು ಕೂಡಾ ಇಲ್ಲಿ ಚಿಂತಿಸಬೇಕು.

**ನಿರ್ಗಚ್ಛತೋಂಬರಂ ಸಂಙ್ಗಮೇತಿ ಭೂಮೌ ಪತೇಚ್ಚ ವಾ ।**
**ಛತ್ರಾದ್ಯಂ ಯತ್ ಕರಸ್ಥಂ ವಾ ಭವೇದೇವಾಶುಭಾಯ ತತ್ ॥೩॥**

ಪ್ರಶ್ನೆ ಇಡಲು ಹೋಗುವಾಗ ಉಟ್ಟವಸ್ತ್ರವು ಸಿಕ್ಕಿಕೊಂಡರೆ, ಅಥವಾ ವಸ್ತ್ರ ಉಡಲು ತೆಗೆಯುವಾಗ ಅದು ಯಾವುದಕ್ಕಾದರೂ ಸಿಕ್ಕಿಕೊಂಡರೆ, ಕೈಯಲ್ಲಿ ಹಿಡಿದ ಕೊಡೆ ಅಥವಾ ಚತ್ರ ಮೊದಲಾದವು ನೆಲದ ಮೇಲೆ ಬಿದ್ದರೆ, ಅದು ಅಶುಭ ಎಂದು ತಿಳಿಯಬೇಕು.

**ಆಗಚ್ಛ ತಿಷ್ಠ ಮಾ ಗಚ್ಛ ಪ್ರವಿಶ ಕ್ವ ನು ಗಚ್ಛಸಿ ।**
**ಇತ್ಯಾದಿವಾಚಃ ಪ್ರಸ್ಥಾನೇ ಭವಂತ್ಯಶುಭದಾ ದೃಢಮ್ ॥೪॥**

ಪ್ರಶ್ನೆ ಇಡಲು ಹೊರಡುವಾಗ ದಾರಿಯಲ್ಲಿ "ಇಲ್ಲಿ ಬಾ," "ನಿಲ್ಲು," "ಎಲ್ಲಿ ಹೋಗುತ್ತಿ ?" ಇವೇ ಮೊದಲಾದ ಮಾತುಗಳು ಕೇಳಿ ಬಂದರೆ ನಿಶ್ಚಯವಾಗಿ ಅಶುಭ ಎಂದು ತಿಳಿಯಬೇಕು.

**ಪಾಷಾಣಾದಿಷು ಪಾದಸ್ಖಲನಂ ಸ್ತಂಭಾದಿಕೇ ತಥಾ ಶಿರಸಃ ।**
**ನೇಷ್ಟಂ ನಿರ್ಗಮನೇನ್ಯಾನ್ಯಪಿ ಚಿಂತ್ಯಾನಿ ಲೋಕಸಿದ್ಧಾನಿ ॥೫॥**

ಪ್ರಶ್ನೆ ಇಡಲು ಹೊರಡುವಾಗ ಕಲ್ಲು ಮೊದಲಾದವುಗಳ ಮೇಲಿಂದ ಕಾಲು ಜಾರಿದರೂ ಕಂಭವೇ ಮೊದಲಾದವುಗಳಿಗೆ ತಲೆ ಜಜ್ಜಿದರೂ, ಅಶುಭ ಇವೇ ಮೊದಲಾದ ಶಕುನಗಳನ್ನು ಆಯಾಯಾ ದೇಶಕಾಲ ಪರಿಸ್ಥಿತಿಯಿಂದ ತಿಳಿದು ಶುಭಾಶುಭಫಲ ಊಹಿಸಿ ಕೊಳ್ಳಬೇಕು.

ಈ ಶಕುನಗಳು ಹೊರಡುವ ಕಾಲಕ್ಕೆ ಸಂಬಂಧಪಟ್ಟದ್ದಾಗಿರುತ್ತವೆ. ಆ ಮೇಲೆ ದಾರಿಯಲ್ಲಿ ಸಂಭವಿಸುವ ಶಕುನಗಳನ್ನು ಶಾಸ್ತ್ರಾಧಾರದಿಂದ ಮುಂದಿನ ಶ್ಲೋಕದಿಂದ ಹೇಳುತ್ತಾನೆ.

**ಅನ್ಯಜನ್ಮಾಂತರಕೃತಂ ಶುಭಂ ವಾ ಯದಿ ವಾಶುಭಮ್ ।**
**ಯತ್ತಸ್ಯ ಶಕುನಃ ಪಾಕಂ ನಿವೇದಯತಿ ಗಚ್ಛತಾಮ್ ॥೬॥**

ಪೂರ್ವ ಜನ್ಮಗಳಲ್ಲಿ ಮಾಡಿದ ಶುಭಾಶುಭ ಫಲಗಳಿಗೆ ಅನುಗುಣವಾಗಿ, ದಾರಿಯಲ್ಲಿ ಹೋಗುವಾಗ, ಈ ಕರ್ಮಫಲಗಳು ಶಕುನರೂಪವಾಗಿ ಸೂಚಿಸಲ್ಪಡುತ್ತವೆ.

**ಸದಸಚ್ಛಕುನೋದ್ಭೂತೌ ಕರ್ತೃಭಿದಾಸ್ತ್ಯೇವ ತತ್ಫಲಾನುಭವೇ ।**
**ಮಾರ್ಗಾದಿಭೇದವಶತಸ್ತದಪಿ ಚ ಶಾಸ್ತ್ರಾಂತರೇ ಕಥಿತಮ್ ॥೭॥**

ದಾರಿಯಲ್ಲಿ ಹೋಗುವಾಗ ಶುಭ ಅಥವಾ ಅಶುಭ ಶಕುನವು ಉಂಟಾದರೆ, ಅದರ ಫಲವನ್ನು ಅನುಭವಿಸುವ ಕರ್ತೃವನ್ನು ನಿರ್ಣಯಿಸುವ ರೀತಿಯು ಅನ್ಯ ಗ್ರಂಥಗಳಲ್ಲಿ ಹೇಳಿರುವುದನ್ನು ಇಲ್ಲಿ ಹೇಳುತ್ತಾನೆ.

ಪಥ್ಯಾತ್ಮಾನಂ ನೃಪಂ ಸೈನ್ಯೇ ಪುರೇ ಚೋದ್ದಿಶ್ಯ ದೇವತಾಮ್ ।
ಸಾರ್ಥೇ ಪ್ರಧಾನಂ ಸಾಮ್ಯೇ ತು ಜಾತಿವಿದ್ಯಾವಯೋಧಿಕಮ್ ॥ಇತಿ॥

1. ಒಬ್ಬಂಟಿಕನಾಗಿ ಹೋಗುವಾಗ ಮಾರ್ಗದಲ್ಲಿ ಒಂದು ಶಕುನವಾದರೆ, ಆ ಶಕುನದ ಫಲವು ತನಗೆ ಸಂಬಂಧಪಟ್ಟದ್ದೆಂದು ತಿಳಿಯಬೇಕು. 2. ರಾಜನ ಸೈನ್ಯವು ಹೋಗುವಾಗ ಶಕುನ ಉಂಟಾದರೆ ಅದು ರಾಜನಿಗೆ ಸಂಬಂಧ ಪಟ್ಟದ್ದೆಂದು, 3. ಪಟ್ಟಣದ ನಡುವೆ ಶಕುನ ಉಂಟಾದರೆ ಆ ಶುಕುನವು ಆ ಪಟ್ಟಣದ ಅಧಿದೇವತೆಗೆ ಸಂಬಂಧ ಪಟ್ಟದ್ದೆಂದು, 4. ಒಂದು ಗುಂಪು ದಾರಿಯಲ್ಲಿ ಹೋಗುತ್ತಿರುವಾಗ ಶಕುನ ಉಂಟಾದರೆ, ಆ ಗುಂಪಿನಲ್ಲಿ ಯಾವಾತನು ಮುಖ್ಯಸ್ಥನೋ ಆತನಿಗೆ ಆ ಶಕುನವು ಸಂಬಂಧ ಪಟ್ಟದ್ದೆಂದು, 5. ಆ ಗುಂಪಿನವರೆಲ್ಲರೂ ಗಣ್ಯ ವ್ಯಕ್ತಿಗಳು ಆಗಿದ್ದರೆ ಅವರಲ್ಲಿ ಮೇಲ್ಜಾತಿಯವನಿಗೆ ಸಂಬಂಧಪಟ್ಟ ಶಕುನವೆಂದು. 6. ಎಲ್ಲರೂ ಒಂದೇ ಜಾತಿಯವರಾದರೆ ಅವರಲ್ಲಿ ಹೆಚ್ಚು ವಿದ್ಯಾವಂತನಾದವನಿಗೆ ಆ ಶಕುನವು ಸಂಬಂಧಪಟ್ಟದ್ದೆಂದು, 7. ಎಲ್ಲರೂ ವಿದ್ಯಾವಂತರಾದರೆ ಅವರಲ್ಲಿ ಹೆಚ್ಚು ವಯಸ್ಸಾದವನಿಗೆ ಆ ಶಕುನವು ಸಂಬಂಧ ಪಟ್ಟದ್ದೆಂದು ತಿಳಿಯಬೇಕು.

ಶಕುನಫಲಾನಾಮಪಿ ಭೂತಾನಾಗತವರ್ತಮಾನತ್ವಮ್ । ತತ್ಸಂಭವದಿಗ್ವಶತೋ ಜ್ಞೇಯಂ ಶಾಸ್ತ್ರಾಂತರೋಕ್ತಮೇತದಪಿ ॥೯॥

ದೃಷ್ಟ ಶಕುನದ ಫಲವು ಹಿಂದಿನದ್ದೋ ಅಥವಾ ಪ್ರಕೃತ ನಡೆಯುತ್ತದೋ ಅಥವಾ ಮುಂದೆ ಸಂಭವಿಸಬಹುದೋ ಎಂದು, ಆ ಶಕುನ ಉಂಟಾದ ದಿಗ್ಭೇದದಿಂದ ತಿಳಿದುಕೊಳ್ಳುವ ಕ್ರಮವನ್ನು ಅನ್ಯಶಾಸ್ತ್ರದ ಆಧಾರದಿಂದ ಮುಂದೆ ಹೇಳುತ್ತಾನೆ.

ಆರಭ್ಯಸ್ವೋದಯಾದರ್ಕಃ ಪೂರ್ವಾದ್ಯಷ್ಟಾಸು ದಿಕ್ಷ್ವಪಿ ।
ಸಂಚರತ್ಯರ್ಧಸಂಯುಕ್ತಾಃ ಸಪ್ತನಾಡೀರ್ದ್ವಿವಾನಿಶಮ್ ॥೧೦॥

ಸೂರ್ಯನು ತನ್ನ ಉದಯದಿಂದ ಪ್ರಾರಂಭಿಸಿ ಒಂದೊಂದು ಯಾಮದಲ್ಲಿ ಕ್ರಮವಾಗಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಪರಿಭ್ರಮಿಸುತ್ತಾನೆ. ಎಂಟು ದಿಕ್ಕುಗಳು ಕ್ರಮವಾಗಿ ಪೂರ್ವ, ಆಗ್ನೇಯ, ದಕ್ಷಿಣ, ನೈಋತ್ಯ, ಪಶ್ಚಿಮ,

ವಾಯುವ್ಯ, ಉತ್ತರ ಮತ್ತು ಈಶಾನ್ಯ ಆಗಿರುತ್ತದೆ. ಒಂದು ಯಾಮ ಅಂದರೆ ದಿನದ ¼ ಭಾಗ ಅಂದರೆ ದಿವಾಮಾನವು 60ಗಳಿಗೆ ಆದಾಗ ¼ಭಾಗ-7½ಗಳಿಗೆ 3ಘಂಟೆ ಒಂದು ಯಾಮ. ಇಲ್ಲಿ ದಿನಮಾನವೆಂದರೆ ಸೂರ್ಯೋದಯದಿಂದ ಮರುದಿನ ಸೂರ್ಯೋದಯದ ವರೆಗಿನ ಕಾಲ ಆಗಿರುತ್ತದೆ. ದಿವಾಮಾನ ಅಂದರೆ ಸೂರ್ಯೋದಯದಿಂದ ಸೂರ್ಯಾಸ್ತವರೆಗಿನ ಕಾಲ ಆಗಿರುತ್ತದೆ. ಇದನ್ನು ನಾಲ್ಕು ಪಾಲು ಮಾಡಿದರೆ ಹಗಲಿನ ಒಂದೊಂದು ಯಾಮ ಆಗುತ್ತದೆ. ಯಾಮ ಪ್ರಮಾಣವು ಆಯಾ ಸ್ಥಳದ ದಿನಮಾನಕ್ಕೆ ಅನುಗುಣವಾಗಿ ವೃದ್ಧಿ ಕ್ಷಯ ಆಗುತ್ತದೆ. ಸೂರ್ಯೋದಯದಿಂದ ಮೊದಲನೇ ಯಾಮವು ಪೂರ್ವದಿಕ್ಕು, ಎರಡನೇ ಯಾಮ ಆಗ್ನೇಯದಿಕ್ಕು, ಮೂರನೇ ಯಾಮ ದಕ್ಷಿಣದಿಕ್ಕು ಮತ್ತು ನಾಲ್ಕನೇ ಯಾಮವು ನೈಋತ್ಯದಿಕ್ಕು, ಕ್ರಮವಾಗಿ ಸೂರ್ಯನು ಸಂಚರಿಸುವ ದಿಕ್ಕು ಆಗಿರುತ್ತದೆ. ಹಗಲಿನ ಯಾಮವು ದಿವಾಮಾನದ ¼ಭಾಗ ಆಗಿರುತ್ತದೆ. ಅದೇ ರೀತಿ ರಾತ್ರಿಮಾನದ ¼ ಅಂಶವಾದ ಮೊದಲನೇ ಯಾಮದಲ್ಲಿ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ, ಎರಡನೇ ಯಾಮದಲ್ಲಿ ವಾಯುವ್ಯ ದಿಕ್ಕಿನಲ್ಲಿ, ಮೂರನೇ ಯಾಮದಲ್ಲಿ ಉತ್ತರ ದಿಕ್ಕಿನಲ್ಲಿ ಮತ್ತು ನಾಲ್ಕನೇ ಯಾಮದಲ್ಲಿ ಈಶಾನ್ಯದಿಕ್ಕಿನಲ್ಲಿ ಸಂಚರಿಸುತ್ತಾನೆ.

**ಮುಕ್ತಪ್ರಾಪ್ತೈಷ್ಯಸೂರ್ಯಾಸು ಫಲಂ ದಿಕ್ಷು ತಥಾವಿಧವ್ ।**
**ಅಂಗಾರದೀಪ್ತಧೂಮಿನ್ಯಸ್ತಾಶ್ಚ ಶಾಂತಾಸ್ತತೋಪರಾಃ ॥೧೧॥**

ಸೂರ್ಯನು ನಿರ್ಗಮಿಸಿದ ದಿಕ್ಕನ್ನು ಅಂಗಾರ (ಕೆಂಡ) ಎಂದು, ಸೂರ್ಯನು ಇರುವ ದಿಕ್ಕು ದೀಪ್ತ (ಉರಿಯುವ) ಎಂದು, ಸೂರ್ಯನು ಮುಂದಕ್ಕೆ ಹೋಗುವದಿಕ್ಕು ಧೂಮ (ಹೊಗೆಯಂತೆ) ಎಂದು ತಿಳಿಯಬೇಕು. ಶಕುನಫಲಗಳು ಕೂಡಾ ಆಯಾದಿಕ್ಕಿಗೆ ಸರಿಯಾಗಿ ಇರುತ್ತದೆ. ಉಳಿದ ಐದು ದಿಕ್ಕುಗಳನ್ನು ಶಾಂತ ದಿಕ್ಕುಗಳು ಎನ್ನುತ್ತಾರೆ.

**ತತ್ಪಂಚಮದಿಶಾಂ ತುಲ್ಯಂ ಫಲಂ ತ್ರೈಕಾಲ್ಯಮಾದಿಶೇತ್ ।**
**ಪರಿಶೇಷದಿಶೋರ್ವಾಚ್ಯಂ ಯಥಾಸನ್ನಂ ಶುಭಾಶುಭವ್ ॥ಇತಿ॥**

1. ಸೂರ್ಯನು ಬಿಟ್ಟ ದಿಕ್ಕು (ಅಂಗಾರ), ಅದರಿಂದ ಐದನೇ ದಿಕ್ಕು,
2. ಸೂರ್ಯನು ಇರುವ ದಿಕ್ಕು (ದೀಪ್ತ), ಅದರಿಂದ ಐದನೇ ದಿಕ್ಕು,
3. ಸೂರ್ಯನು ಮುಂದಕ್ಕೆ ಹೋಗುವದಿಕ್ಕು (ಧೂಮ), ಒಂದೇ ಸಂಜ್ಞೆ

ಉಳ್ಳದ್ದಾಗಿ ಇರುತ್ತದೆ. ಸೂರ್ಯನು ನಿರ್ಗಮಿಸಿದ ದಿಕ್ಕಿನಲ್ಲಿ ಶಕುನ ಉಂಟಾದರೆ ಅದರ ಫಲವು ಕಳೆದು ಹೋಗಿರುತ್ತದೆ ಎಂದು, ಸೂರ್ಯನು ಇರುವ ದಿಕ್ಕಿನಲ್ಲಿ ಶಕುನ ಉಂಟಾದರೆ ಅದರ ಫಲವು ಪ್ರಕೃತ ನಡೆಯುತ್ತದೆ ಎಂದು, ಸೂರ್ಯನು ಮುಂದಕ್ಕೆ ಹೋಗಲಿರುವ ದಿಕ್ಕಿನಲ್ಲಿ ಶಕುನ ಉಂಟಾದರೆ ಅದರ ಫಲವು ಮುಂದೆ ಸಂಭವಿಸುತ್ತದೆ ಎಂದು ತಿಳಿಯಬೇಕು. ಈ ಹೇಳಿದ ದಿಕ್ಕುಗಳಿಂದ ಐದನೇ ದಿಕ್ಕಿನಲ್ಲಿ ಶಕುನ ಉಂಟಾದರೆ ಅದೇ ರೀತಿಯ ಫಲವು ಸಂಭವಿಸುತ್ತದೆ ಎಂದು ತಿಳಿಯಬೇಕು. ಶಾಂತದಿಕ್ಕಿನಲ್ಲಿ ಶಕುನ ಉಂಟಾದರೆ ಅದನ್ನು ಹಿಂದಿನ ಮತ್ತು ಮುಂದಿನ ದಿಕ್ಕುಗಳಲ್ಲಿ ಯಾವುದಕ್ಕೆ ಹತ್ತಿರ ಬೀಳುತ್ತದೋ, ಆ ದಿಕ್ಕಿಗೆ ಅನ್ವಯಿಸಿಕೊಂಡು ಊಹಿಸಿ ಹೇಳಬೇಕು.

**ರಾಜಾ ಕುಮಾರೋ ನೇತಾ ಚ ದೂತಃ ಶ್ರೇಷ್ಠೀ ಚರೋ ದ್ವಿಜಃ ।**
**ಗಜಾಧ್ಯಕ್ಷಶ್ಚ ಪೂರ್ವಾದ್ಯಾಃ ಕ್ಷತ್ರಿಯಾದ್ಯಾಶ್ಚತುರ್ದಿಶಃ ॥೧೩॥**

ಪೂರ್ವಾದಿ ಎಂಟು ದಿಕ್ಕುಗಳಿಂದ ತಿಳಿಯ ಬೇಕಾದ ವ್ಯಕ್ತಿಗಳನ್ನು ಕ್ರಮವಾಗಿ ಹೇಳುತ್ತಾನೆ. ಪೂರ್ವ-ರಾಜ, ಆಗ್ನೇಯ-ರಾಜಕುಮಾರ, ದಕ್ಷಿಣ-ಸೇನಾಧಿಪತಿ, ನೈಋತ್ಯ-ದೂತ, ಪಶ್ಚಿಮ-ಶ್ರೇಷ್ಠಿ (ವ್ಯಾಪಾರಿ ತಂಡದ ಮುಖ್ಯಸ್ಥ), ವಾಯುವ್ಯ-ಗೂಢಚಾರ, ಉತ್ತರ-ಬ್ರಾಹ್ಮಣ, ಈಶಾನ್ಯ-ಮಾವುತ, ಎಂದು ಪುನಃ ನಾಲ್ಕು ದಿಕ್ಕುಗಳಿಗೆ ಕ್ರಮವಾಗಿ ಪೂರ್ವ-ಕ್ಷತ್ರಿಯ, ದಕ್ಷಿಣ-ವೈಶ್ಯ, ಪಶ್ಚಿಮ-ಶೂದ್ರ ಮತ್ತು ಉತ್ತರ ದಿಕ್ಕಿಗೆ-ಬ್ರಾಹ್ಮಣ ಎಂದು ನಾಲ್ಕು ವರ್ಣದವರನ್ನು ತಿಳಿಯಬೇಕು.

**ಗಚ್ಛತಸ್ತಿಷ್ಠತೋ ವಾಪಿ ದಿಶಿ ಯಸ್ಯಾಂ ಪ್ರತಿಷ್ಠಿತಃ ।**
**ವಿರೌತಿ ಶಕುನೋ ವಾಚ್ಯಸ್ತದ್ದಿಕ್ಸ್ಥೇನ ಸಮಾಗಮಃ ॥೧೪॥**

ದೈವಜ್ಞನು ಹೋಗುತ್ತಿರುವಾಗ ಅಥವಾ ನಿಂತಿರುವಾಗ ಯಾವ ದಿಕ್ಕಿನಲ್ಲಿ ಶಕುನವು ಕಂಡು ಬರುತ್ತದೋ, ಆ ದಿಕ್ಕು ಸೂಚಿಸುವ ವ್ಯಕ್ತಿಯೊಂದಿಗೆ ಸಮಾಗಮ ಆಗುತ್ತದೆ ಎಂದು ತಿಳಿಯಬೇಕು.

**ಪ್ರಾಚ್ಯಾಂ ಖಲು ಶಕುನಘೋ ಯದಿ ಖಲು ಭವಿತಾ ಸಮಾ-**
**ಗಮೋ ರಾಜ್ಞಾ । ರಾಜಕುಮಾರೇಣಾಗ್ನೌ ಯಾಮ್ಯಾದಿಷ್ವೇ-**
**ವಮೇವ ನೇತೃಮುಖ್ಯೈಃ ॥ಇತಿ॥೧೫॥**

ಪೂರ್ವದಿಕ್ಕಿನಲ್ಲಿ ಶಕುನ ಸಂಭವಿಸಿದರೆ, ಆ ದಿಕ್ಕು ಸೂಚಿಸುವಂತೆ ರಾಜನೊಂದಿಗೆ ಭೇಟಿ ಸಂಭವಿಸುತ್ತದೆ. ಆಗ್ನೇಯ ದಿಕ್ಕಿನಲ್ಲಿ ಶಕುನ ಸಂಭವಿಸಿದರೆ ಯುವರಾಜನ ಸಮಾಗಮ ಉಂಟಾಗುತ್ತದೆ. ಇದೇ ರೀತಿ ಶಕುನ ಕಂಡು ಬಂದ ದಿಕ್ಕಿಗೆ ಸೂಚಿತ ವ್ಯಕ್ತಿಯೊಂದಿಗೆ ಕೂಡುವಿಕೆ ಆಗುತ್ತದೆ, ಎಂದು ತಿಳಿಯಬೇಕು.

ಪಾಷಣ್ಡಾಶ್ರಮವರ್ಣಾನಾಂ ಸವರ್ಣಾ: ಕಾರ್ಯಸಿದ್ಧಯೇ ।
ತ ಏವ ವಿಪರೀತಾಃ ಸ್ಯುರ್ದೂತಾಃ ಕಾರ್ಯವಿಪತ್ತಯೇ ॥೧೬॥

ಯಾರ ವಿಚಾರವಾಗಿ ಪ್ರಶ್ನೆ ಆಗಿರುತ್ತದೋ ಅವನು ಮತ್ತು ಅದನ್ನು ಕೇಳಲು ಬಂದ ಅವನ ಪ್ರತಿನಿಧಿಯು ಒಂದೇ ಜಾತಿಯವರಾದರೆ ಅಥವಾ ಒಂದೇ ವೃತ್ತಿಯವರಾದರೆ ಆ ಪ್ರಶ್ನೆಯು ಸಿದ್ಧಿಸುತ್ತದೆ. ಪ್ರಶ್ನೆ ಕೇಳಲಿಕ್ಕೆ ಬಂದವನು ಭಿನ್ನಜಾತಿ ಅಥವಾ ವೃತ್ತಿಯವನಾದರೆ ಆ ಪ್ರಶ್ನೆಯು ಕೈಗೂಡುವುದಿಲ್ಲ ಎಂದು ತಿಳಿಯಬೇಕು.

ಕಾರ್ಪಾಸೌಷಧಕೃಷ್ಣಧಾನ್ಯಲವಣಂ ಜಾಲಾದಿ ಹಿಂಸಾರ್ಥಕಂ
ಭಸ್ಮಾಂಗಾರಮಯಶ್ಚ ತಕ್ರಮುರಗಂ ಪೂತಿಂ ಚ ವಿಟ್‌ಛರ್ದಿತೇ ।
ಭ್ರಾಂತಾಪನ್ನಜಳಾಂಧಮೂಕಬಧಿರಕ್ಲೀಬಾಂಶ್ಚ ಸನ್ಯಾಸಿನೋ
ಯದ್ಯದ್ಯಂಜ್ಯನಸೋರನಿಷ್ಟಮಖಿಲಂ ಕಷ್ಟಂ ನಿಮಿತ್ತಂ ವಿದುಃ ॥

ದೃಷ್ಟ ಅಶುಭ ಶಕುನಗಳು:-ಹತ್ತಿ, ಮದ್ದು, ಕಪ್ಪುಧಾನ್ಯ, ಉಪ್ಪು, ಹಿಂಸೆಗೆ ಯೋಗ್ಯವಾದ ಬಲೆ, ಕತ್ತಿ, ಮೊದಲಾದ ಆಯುಧಗಳು, ಭಸ್ಮ, ಅಂಗಾರ ಅಥವಾ ಇದ್ದಲು, ಕಬ್ಬಿಣ, ಮಜ್ಜಿಗೆ, ಹಾವು, ದುರ್ಗಂಧಉಳ್ಳವಸ್ತುಗಳು, ಮಲ, ವಾಂತಿಮಾಡುವುದು, ಹುಚ್ಚ, ರೋಗಿ, ಮೂರ್ಖ, ಕುರುಡ, ಕಿವುಡ, ನಪುಂಸಕ, ವೈರಾಗಿ ಇವರೆಲ್ಲಾ ದಾರಿಯಲ್ಲಿ ಎದುರಾಗಿ ಬಂದರೆ ಕೆಟ್ಟ ಶಕುನಗಳೆಂದು ತಿಳಿಯಬೇಕು. ದಾರಿಯಲ್ಲಿ ಹೋಗುವಾಗ ಕಣ್ಣಿಗಾಗಲೀ, ಮನಸ್ಸಿಗಾಗಲೀ ಬೇಸರವನ್ನು ಉಂಟು ಮಾಡುವಂಥವುಗಳು ಅಶುಭ ಶಕುನ ಎಂದು ತಿಳಿಯಬೇಕು.

ಪಥಶ್ಛೇದೋ ಹಿ ಮಾರ್ಜಾರಗೋಧಾನಕುಲವಾನರೈಃ ।
ಸರ್ಪಹೇಂಧನಪಾಷಾಣತೃಣಾನೀತಿಶ್ಚ ದೋಷಕೃತ್ ॥೧೮॥

ದಾರಿಯಲ್ಲಿ ಹೋಗುವಾಗ ಬೆಕ್ಕು, ಕೋತಿ, ಅರಣೆ, ಉಡು, ಮುಂಗುಸಿ, ಮಂಗ, ಇವುಗಳೆಲ್ಲಾ ಅಡ್ಡವಾಗಿ ಹೋದರೆ ಅಶುಭ. ಸಾಸಿವೆ, ಕಟ್ಟಿಗೆ, ಹುಲ್ಲು

ಇವುಗಳನ್ನು ಎದುರಾಗಿ ತರುತ್ತಿದ್ದರೆ ಕಾರ್ಯಹಾನಿ ಅಥವಾ ಅಶುಭಫಲ ಸಂಭವಿಸುತ್ತದೆ.

ಆಮಂ ಮಾಂಸಮಥಾಸವಂ ಮಧುಘೃತೇ ಧೌತಾಂಶುಕಾಲೇಪನಂ
ರತ್ನೇಭದ್ವಿಜವಾಜಿನಶ್ಚ ನೃಪತಿಂ ಸಂವರ್ಧಮಾನಂ ನರಮ್ ।
ದೇವಂ ಪಾಣ್ಡುರಚಾಮರಂ ಸುಮಧುರಸ್ನಿಗ್ಧಾನ್ನಪಾನೇ ಶವಂ
ವಿಪ್ರೌ ಚ ಜ್ವಲದಗ್ನಿಮತ್ರ ಶುಭದಂ ವಿದ್ಯಾನ್ನಿಮಿತ್ತಂ ಬುಧಃ ॥

ಶುಭಶಕುನಗಳು:-ಹಸಿಮಾಂಸ, ಶರಾಬು, ಜೇನು, ತುಪ್ಪ, ಮಡಿಮಾಡಿದ ವಸ್ತ್ರ, ಪ್ಯಾಗೆ ಹಚ್ಚುವಗಂಧ, ರತ್ನ, ಆನೆ, ಪಕ್ಷಿ, ಕುದುರೆ, ಅರಸ, ಶ್ರೀಮಂತ ಅಥವಾ ಸಂಪನ್ನ ವ್ಯಕ್ತಿ, ದೇವರು, ಬಿಳಿಚಾಮರ, ಮಧುರವಾದ ಅನ್ನ-ಪಾನಾದಿಗಳು, ಹೆಣ, ಇಬ್ಬರು ಬ್ರಾಹ್ಮಣರು, ಉರಿಯುತ್ತಿರುವ ಬೆಂಕಿ, ಇವುಗಳೆಲ್ಲಾ ದಾರಿಯಲ್ಲಿ ಎದುರಾದರೆ ಶುಭಶಕುನಗಳೆಂದು ತಿಳಿಯಬೇಕು.

ವಿವಾಹ ಪ್ರಶ್ನೆಯಲ್ಲಿ ಅಥವಾ ನೆಂಟಸ್ತಿಕೆಯ ಮಾತುಕತೆಯಲ್ಲಿ ಹೆಣ ನೋಡಿದರೆ ಆ ಸಂಬಂಧವು ಕೈಗೂಡುವುದಿಲ್ಲ ಎಂದು ತಿಳಿಯಬೇಕು.

ಪ್ರದಕ್ಷಿಣಂ ಖಗಮೃಗಾ ಯಾಂತೋ ನೈವಂ ಶ್ವಜಂಬುಕೌ ।
ಅಯುಗ್ಮಾಶ್ಚ ಮೃಗಾಶ್ಯಸ್ತಾಃ ಶಸ್ತಾ ನಿತ್ಯಂ ಚ ದರ್ಶನೇ ॥೨೦॥

ದಾರಿಯಲ್ಲಿ ಹೋಗುವಾಗ ಪಕ್ಕಿಗಳು, ಜಿಂಕೆ ಅಥವಾ ಮೃಗಗಳು ಪ್ರದಕ್ಷಿಣಾ ಕ್ರಮದಲ್ಲಿ (ಪೂರ್ವದಿಂದ ಪಶ್ಚಿಮಕ್ಕೆ) ಹೋಗುತ್ತಿದ್ದರೆ ಅದು ಶುಭ ಶಕುನ. ನಾಯಿ ಅಥವಾ ನರಿಯು ಪ್ರದಕ್ಷಿಣಾ ಕ್ರಮದಲ್ಲಿ ಹೋಗುವುದು ಅಶುಭ ಶಕುನ ಆಗಿರುತ್ತದೆ. ದಾರಿಯಲ್ಲಿ ಹೋಗುವಾಗ 1, 3, 5, ಇತ್ಯಾದಿ ವಿಷಮ ಸಂಖ್ಯೆಯುಳ್ಳ ಜಿಂಕೆ ಅಥವಾ ಬೇರೆ ಸಾಧು ಪ್ರಾಣಿಗಳು ನೋಡಲಿಕ್ಕೆ ಸಿಕ್ಕಿದರೆ ಅದು ಶುಭಶಕುನ ಆಗಿರುತ್ತದೆ.

ಚಾಷಭಾಸಭರದ್ವಾಜನಕುಲಛಾಗಬರ್ಹಿಣಃ ।
ಮತ್ಸ್ಯೌ ಘಟೀತಿ ಪದ್ಯೋಕ್ತಂ ನಿಮಿತ್ತಂ ಚ ಶುಭಪ್ರದಮ್ ॥

ಚಾಷಪಕ್ಷಿ (ನೀಲವರ್ಣದ ಪಕ್ಕಿ), ಹುಂಜ, ಟಿಟ್ಟಿಭ, ಮುಂಗುಸಿ, ಕುರಿ, ಮತ್ತು ನವಿಲು ಎದುರಾಗಿ ಬಂದರೆ ಶುಭಶಕುನ ಎಂದು ತಿಳಿಯಬೇಕು. ಬೃಹ

ಜ್ಞಾತಕದ ರಾಶಿಶೀಲಾಧ್ಯಾಯದಲ್ಲಿ "ಮತ್ಸ್ಯೌಘಟೇತಿ" ಎಂಬ ಪದ್ಯದಲ್ಲಿ ಹೇಳಿದ ರಾಶಿಸ್ವರೂಪದ ಲಕ್ಷಣಗಳು ಕಂಡು ಬಂದರೆ ಅವು ಶುಭಶಕುನ ಎಂದು ತಿಳಿಯಬೇಕು.

ಶೃಗಾಲನಕುಲವ್ಯಾಘ್ರಚಕೋರೋರಗಪೋತ್ರಿಣಃ ।
ಗಚ್ಛಂತೋ ದಕ್ಷಿಣೇ ವಾಮೇ ಶ್ವಕಾಕಾಜಮೃಗದ್ವಿಪಾಃ ॥೨೨॥
ದೃಷ್ಟಾಃ ಪ್ರಶಸ್ತಾ ಏತೇ ತು ನ ಶುಭಾಃ ಸ್ಯುರ್ವಿಪರ್ಯಯಾತ್ ॥

ನರಿ, ಮುಂಗುಸಿ, ಹುಲಿ, ಚಕೋರಪಕ್ಷಿ, ನಾಗರಹಾವು, ಹಲ್ಲಿ ಇವುಗಳು ಬಲಬದಿಯಲ್ಲಿ ಹೋಗುತ್ತಿದ್ದರೆ ಶುಭ. ಎಡಬದಿಯಲ್ಲಿ ಹೋಗುತ್ತಿದ್ದರೆ ಅಶುಭ ಶಕುನ ಎಂದು ತಿಳಿಯಬೇಕು. ನಾಯಿ, ಕಾಗೆ, ಆಡು, ಜಿಂಕೆ, ಆನೆ ಇವುಗಳು ಎಡದ ಬದಿಯಲ್ಲಿ ಹೋಗುತ್ತಿದ್ದರೆ ಶುಭ, ಬಲ ಬದಿಯಲ್ಲಿ ಹೋಗುತ್ತಿದ್ದರೆ ಅಶುಭಶಕುನ ಎಂದು ತಿಳಿಯಬೇಕು.

ಶಾಂತಾ ದೀಪ್ತತ್ವಮಾಶಾನಾಂ ಶಕುನಾನಾಂ ಚ ತದ್ವಶಾತ್ ।
ಶುಭಾಶುಭತ್ವಮುಕ್ತ್ವೇತದಪಿ ಶಾಸ್ತ್ರಾಂತರೋದಿತಮ್ ॥೨೪॥
ರವಿಮುಕ್ತಾದಯಸ್ತಿಸ್ರೋ ದೀಪ್ತಾ ನೇಷ್ಟಾಸ್ತತೋಪರಾಃ ।
ಶಾಂತಾಃಶುಭಾಃ ಸ್ವದಿಕ್ತುಲ್ಯಫಲಂ ಹಿ ಶಕುನಂ ಮತಮ್ ॥೨೩॥

ದಿಕ್ಕುಗಳ ಶಾಂತತ್ವ, ದೀಪ್ತತ್ವ ಮೊದಲಾದ ಸಂಜ್ಞೆಗಳನ್ನು ಹಿಂದೆ ಹೇಳಿರುತ್ತದೆ. ಶಕುನ ಕಂಡುಬಂದ ದಿಕ್ಕಿನ ಸಂಜ್ಞೆಗೆ ಅನುಗುಣವಾದ ಕಾಲದಲ್ಲಿ ಆ ಶಕುನ ಫಲವು ಲಭಿಸುತ್ತದೆ, ಎಂದು ಇತರ ಗ್ರಂಥಗಳಲ್ಲಿ ಕೂಡಾ ಹೇಳಿರುತ್ತದೆ. ಸೂರ್ಯನು ನಿರ್ಗಮಿಸಿದ, ಸ್ಥಿತ ಮತ್ತು ಮುಂದಕ್ಕೆ ಹೋಗುವ ಮೂರು ದಿಕ್ಕಿನಲ್ಲಿ ಸಂಭವಿಸಿದ ಶಕುನಗಳು ಸೂರ್ಯನ ಅವಸ್ಥೆ ತುಲ್ಯ (ಅಂಗಾರ, ದೀಪ್ತ ಮತ್ತು ಧೂಮ) ಫಲ ನೀಡುತ್ತದೆ. ಶಾಂತ ಅವಸ್ಥೆಯಲ್ಲಿ ಶಕುನಗಳು ಶುಭಫಲ ನೀಡುತ್ತದೆ.

ಯಾವಾರ್ಧಮುದಯಾತ್ಪೂರ್ವಮಾರಭ್ಯಾಷ್ಟಾಸು ದಿಕ್ಷ್ವಪಿ ।
ಪರಿಭ್ರಮತಿ ಶಿಗ್ಮಾಂಶುರ್ಯಾಮೇಷ್ವಷ್ಟಾಸು ಸರ್ವದಾ॥೨೬॥
ರವೌ ಜ್ವಾಲಾ ತತೋ ಧೂಮಚ್ಛಾಯಾಮೃದ್ವಾರಿಭೂಮಯಃ ।
ಭಸಿತಾಂಗಾರಕಾಶ್ಚೇತಿ ಪ್ರದಕ್ಷಿಣ್ಯೇನ ಸಂಸ್ಥಿತಮ್ ॥೨೭॥

ಸೂರ್ಯೋದಯಕ್ಕಿಂತ ಮೂರು ಮುಕ್ಕಾಲುಗಳಿಗೆ ಮೊದಲು ಪ್ರಾರಂಭಿಸಿ ದಿನ–ರಾತ್ರಿಮಾನವನ್ನು 8ಪಾಲು ಮಾಡಿ, ಸೂರ್ಯನು ಪ್ರತೀಯಾಮದಲ್ಲಿ ಪೂರ್ವಾದಿ 8ದಿಕ್ಕುಗಳಲ್ಲಿ ಸಂಚರಿಸುತ್ತಾನೆ. ಈ 8 ದಿಕ್ಕುಗಳಲ್ಲಿ 1. ಸೂರ್ಯನಿರುವ ದಿಕ್ಕು ಜ್ವಾಲೆ, ನಂತರ ಕ್ರಮವಾಗಿ 2. ಧೂಮ, 3. ಛಾಯೆ, 4. ಮಣ್ಣು, 5. ಜಲ, 6. ಭೂಮಿ, 7. ಬೂದಿ ಮತ್ತು 8. ಕೆಂಡ ಆಗಿರುತ್ತದೆ.

**ಅಂಗಾರಾದಿತ್ರಯಂ ದೀಪ್ತಂ ಶಾಂತಂ ನ್ಯೃತ್ಯಾದಿಕತ್ರಯಮ್ ।**
**ಛಾಯಾ ಪೂರ್ವಂ ಶುಭಂ ಭಸ್ಮ ಪಶ್ಚಾಚ್ಚೈವಂ ಶುಭಂ ಭವೇತ್ ॥**

ಅಂಗಾರವೇ ಮೊದಲಾದ ಮೂರು ದಿಕ್ಕುಗಳು (ಅಂಗಾರ, ಜ್ವಾಲೆ, ಮತ್ತು ಧೂಮ) ಉರಿಯುತ್ತಾ ಇದೆ. ನ್ಯೃತ್ತಿಕಾದಿ ಮೂರು ದಿಕ್ಕುಗಳು (ಮಣ್ಣು, ಜಲ ಮತ್ತು ಭೂಮಿ) ತಣ್ಣಗೆ ಆಗಿರುತ್ತದೆ ಛಾಯೆಯ ಪೂರ್ವಾರ್ಧ ಮತ್ತು ಭಸ್ಮದ ಉತ್ತರಾರ್ಧ ಶುಭ ಆಗಿರುತ್ತದೆ.

**ಏಕಾದಶಾದಿಮೇನಿಷ್ಟೇ ದ್ವಿತೀಯೇ ಶಕುನೇ ಪುನಃ । ಪ್ರಾಣಾ–**
**ಯಾಮಾಃ ಷೋಡಶ ಸ್ಯುಸ್ತೃತೀಯೇ ತು ನ ಚ ವ್ರಜೇತ್ ॥**

**ಅಶುಭ ಶಕುನ ಪರಿಹಾರ:**-ದಾರಿಯಲ್ಲಿ ಅಶುಭ ಶಕುನ ಉಂಟಾದರೆ ಹಿಂದಿರುಗಿ ಬಂದು ಹನ್ನೊಂದು ಸಲ ಪ್ರಾಣಾಯಾಮ ಮಾಡಬೇಕು. ಎರಡನೇ ಸಲವೂ ಅಶುಭಶಕುನ ಕಂಡು ಬಂದರೆ ಹದಿನಾರು ಸಲ ಪ್ರಾಣಾಯಾಮ ಮಾಡಿ ಹೊರಡಬೇಕು. ಮೂರನೇ ಸಲವೂ ಅಶುಭಶಕುನ ಸಂಭವಿಸಿದರೆ, ಪ್ರಯಾಣ ಅಥವಾ ಸಂಬಂಧಪಟ್ಟ ಕಾರ್ಯ ಮುಂದುವರಿಸ ಬಾರದು.

**ಪ್ರಶ್ನೇ ತತ್ಕಾಲಜಂ ಯದ್ಯನ್ನಿರ್ಗಮೋ ಯದ್ಯದಧ್ವನಿ ।**
**ಪ್ರೋಕ್ತಂ ಪ್ರಷ್ಟೃಗೃಹಪ್ರಾಪ್ತೌ ತತ್ತತ್ಕ್ರಾಯೇಣ ಚಿಂತ್ಯತಾಮ್ ॥**

ಪ್ರಚ್ಛಕನ ಗೃಹಪ್ರವೇಶಿಸುವ ದೈವಜ್ಞನಿಗೆ ಮೊದಲು ಸಂಭವಿಸಿದ, ದಾರಿಯಲ್ಲಿ ಸಂಭವಿಸಿದ ಮತ್ತು ಗೃಹ ಪ್ರವೇಶ ಕಾಲದಲ್ಲಿ ಸಂಭವಿಸಿದ ಶಕುನಗಳ ಫಲಾಫಲ ವಿಚಾರಿಸಲ್ಪಡ ತಕ್ಕವುಗಳಾಗಿವೆ.

**ಆರ್ತಾಲಯಂ ವಿಶತಿ ದೈವವಿದೀತ ಏತದ್ ದ್ವಾರಾ ನಿರೇತಿ ಯದಿ ಕೋಪಿ ಸರುಜ್ಞ ವಿಪ್ರಿಯೇತ । ದ್ವಾರಾ ತಯೈವ ವಿಶತೀಹ ಯದೀ. ತರಶ್ಚೇಜ್ಞೇವೇತ್ಸ ನೂನಮಿತಿ ಮೇ ಗುರುಣೋಪದಿಷ್ಟಮ್ ॥೩೦॥**

ರೋಗ ಪ್ರಶ್ನೆ ಆದರೆ ದೈವಜ್ಞನು, ರೋಗಿಯ ಮನೆಯನ್ನು ಪ್ರವೇಶಿಸುವ ಕಾಲದಲ್ಲಿ ಯಾರಾದರೂ ಮನೆಯ ಒಳಗಿನಿಂದ ಹೊರಗೆ ಬರುತ್ತಿದ್ದರೆ, ಆ ರೋಗಿಯು ಮರಣ ಹೊಂದುತ್ತಾನೆ ಎಂದು ತಿಳಿಯಬೇಕು. ದೈವಜ್ಞನು ಮನೆ ಪ್ರವೇಶಿಸುವ ಕಾಲದಲ್ಲಿ ಯಾರಾದರೂ ಆ ಮನೆಯನ್ನು ಪ್ರವೇಶಿಸಿದರೆ ಆ ರೋಗಿಯು ಬದುಕುತ್ತಾನೆ ಎಂದು ತಿಳಿಯಬೇಕು. ಈ ವಿಚಾರ ನನಗೆ, ನನ್ನ ಗುರುವಿನಿಂದ ಉಪದೇಶಿಸಲ್ಪಟ್ಟಿದೆ.

**ಗೃಹಾಂತಿಕಂ ಪ್ರಷ್ಟುರಿಹಾಭಿಯಾತೇ ತತೋ ವಧೂಃ ಪ್ರಶ್ನ-ವಿಚಾರಿಣೀತ್ಥಮ್ । ವಿನಿರ್ಗತಾ ಮೂಲಫಲೋಪಪನ್ನಾ ರಜ-ಸ್ವಲೋನ್ಮೂಲವಿನಾಶಿನೀ ಸ್ಯಾತ್ ॥೩೨॥**

ದೈವಜ್ಞನು ಪ್ರಚ್ಛಕನ ಗೃಹ ಪ್ರವೇಶಿಸುವ ಕಾಲದಲ್ಲಿ ಆ ಮನೆಯಿಂದ ರಜಸ್ವಲೆ ಸ್ತ್ರೀ, ಕಂದಮೂಲ ಮತ್ತು ಫಲಗಳನ್ನು ಹಿಡಿದು ದೈವಜ್ಞನ ಎದುರಿಗೆ ಬಂದು, ಏನಾದರೂ ವಿಚಾರಿಸಿದರೆ ಪ್ರಚ್ಛಕನ ಸಕಲ ಸಂಪತ್ತಿನ ನಾಶ ಆಗುತ್ತದೆ ಎಂದು ತಿಳಿಯಬೇಕು.

**ವೇದಾಧ್ಯಯನಘೋಷಶ್ಚ ತಥಾ ಪುಣ್ಯಾಹನಿಸ್ಸ್ವನಃ । ಗಂಧಶ್ಚ ಸುರಭಿರ್ವಾಯುಃ ಸುಖಸ್ಪರ್ಶಃ ಪ್ರದಕ್ಷಿಣಃ ॥೩೩॥ ವೃಷಸ್ಯ ಚಾನುಲೋಮಸ್ಯ ಸ್ವನಸ್ತದ್ವದ್ಗವಾಮಪಿ । ಪ್ರವೇಶಸಮಯೇ ಪ್ರಷ್ಟುರಾರೋಗ್ಯಾದಿಫಲಾಪ್ತಯೇ ॥೩೪॥**

ದೈವಜ್ಞನು ಪ್ರಚ್ಛಕನ ಗೃಹ ಪ್ರವೇಶಿಸುವಾಗ, ವೇದಪಠಣ ಅಥವಾ ದೇವತಾರ್ಚನ ಮಂತ್ರ ಕೇಳಿಬಂದರೆ, ಸುಗಂಧ ದ್ರವ್ಯದ ಪರಿಮಳ, ಸುಖಕರವಾದ ಗಾಳಿಯ ಸ್ಪರ್ಶ ಇತ್ಯಾದಿ ಅಥವಾ ಹೋರಿಯು ಎದುರಾಗಿ ಬರುವುದು, ದನಗಳು, 'ಅಂಬಾ' ಎಂದು ಕರೆಯುವುದು, ಇತ್ಯಾದಿ ಶುಭಶಕುನ ಕಂಡು ಬಂದರೆ ಪ್ರಚ್ಛಕನ ರೋಗ ನಿವಾರಣೆ ಆಗುತ್ತದೆ ಎಂದು ತಿಳಿಯಬೇಕು.

ಶಯನಾಸನಯಾನಾನಾಮುತ್ತಾನಾನಾಂ ಚ ದರ್ಶನಮ್ ।
ನ್ಯುಬ್ಜಾನಾಮಿತರೇಷಾಂ ಚ ಪಾತ್ರಾದೀನಾಮಶೋಭನಮ್ ॥

ಮಂಚ, ಆಸನ, ವಾಹನ ಇವುಗಳೆಲ್ಲ ಊರ್ಧ್ವಮುಖವಾಗಿ ನಿಲ್ಲಿಸಿದರೆ ಅಥವಾ ಪಾತ್ರೆ, ಕೊಡಪಾನ ಇತ್ಯಾದಿ ಕವಚಿ ಇದ್ದರೆ, ಅವೆಲ್ಲ ಅಶುಭಶಕುನ ಎಂದು ತಿಳಿಯಬೇಕು.

**ಆತುರಸ್ಯ ಗೃಹೇ ಯಸ್ಯ ಭಿದ್ಯಂತೇ ವಾ ಪತಂತಿ ವಾ ।**
**ಅತಿಮಾತ್ರಮನುತ್ರಾಣಿ ದುರ್ಲಭಂ ತಸ್ಯ ಜೀವಿತಮ್ ॥೩೬॥**

ರೋಗಿಯ ಮನೆಯಲ್ಲಿ ಪ್ರಚ್ಛಕನ ಸಂಮುಖದಲ್ಲಿ ಪಾತ್ರೆಗಳು ಮೇಲಿನಿಂದ ಕೆಳಗೆ ಬೀಳುವುದು, ಒಡೆದು ಹೋಗುವುದು ಇತ್ಯಾದಿ ಸಂಭವಿಸಿದರೆ ಆ ರೋಗಿಯು ಬದುಕುವುದು ಅಸಾಧ್ಯವೆಂದು ತಿಳಿಯಬೇಕು.

**ನಿವಾತೇ ದೀಪನಾಶಃ ಸ್ಯಾನ್ಮಂದಿರೇ ಯಸ್ಯ ರೋಗಿಣಃ ।**
**ಸ ನ ಜೀವತಿ ಚುಲ್ಯಾದೌ ಚಾಗ್ನಿನಾಶಃ ಸತೀಂಧನೇ ॥೩೭॥**

ರೋಗಿಯ ಮನೆಯಲ್ಲಿ ಇಟ್ಟಿರುವ ದೀಪವು ಗಾಳಿಯಿಲ್ಲದೆ, ನಂದಿ ಹೋಗುವುದು, ಒಲೆಯಲ್ಲಿರುವ ಬೆಂಕಿಯು, ಕಟ್ಟಿಗೆ ಮೊದಲಾದವು ಸರಿ ಇದ್ದರೂ ಗಾಳಿ ಬೀಸದೇ ಇದ್ದರೂ ನಂದಿ ಹೋಗುವುದು, ಇತ್ಯಾದಿ ಅಶುಭಶಕುನಗಳಾದರೆ ಆ ರೋಗಿಯು ಬದುಕುವುದಿಲ್ಲ ಎಂದು ತಿಳಿಯಬೇಕು.

ಇವೆಲ್ಲ ಪ್ರಚ್ಛಕನ ಗೃಹಪ್ರವೇಶ ಅಥವಾ ಗೃಹದಲ್ಲಿ ಸಂಭವಿಸುವ ಶಕುನಗಳು ಆಗಿರುತ್ತವೆ. ಇಲ್ಲಿಗೆ ಪ್ರಶ್ನಮಾರ್ಗ ಅಧ್ಯಾಯ ಮೂರು ಮುಗಿಯಿತು.

## ಪ್ರಶ್ನಮಾರ್ಗ ನಾಲ್ಕನೇ ಅಧ್ಯಾಯ

## ಅಷ್ಟಮಂಗಲ ಪ್ರಶ್ನೆ-ಶಕುನ

**ಪ್ರಶ್ನಾನುಷ್ಠಾನಮೇನೇನ ಲಕ್ಷಣಾನ್ಯಪಿ ಕಾನಿಚಿತ್ ।**
**ಶಾಸ್ತ್ರಾಂತರೇಷು ದೃಷ್ಟಾನಿ ಕಥ್ಯಂತೇ ಖಲ್ವನಂತರಮ್ ॥೧॥**

ಈ ಅಧ್ಯಾಯದಲ್ಲಿ ಅಷ್ಟಮಂಗಲ ಪ್ರಶ್ನೆಯ ವಿಧಾನ ಮತ್ತು ಇತರ ಶಾಸ್ತ್ರಗಳಲ್ಲಿ ಹೇಳಿರುವ, ಅದಕ್ಕೆ ಸಂಬಂಧಪಟ್ಟ ಶಕುನಗಳನ್ನು ಇಲ್ಲಿ ಹೇಳುತ್ತಾನೆ.

**ಸ್ನಾತ್ವಾ ಧೃತಸಿತವಾಸಾ ಭೃತಭಸ್ಮಾ ಪ್ರಾಙ್ಮುಖಃ ಸುಖಾಸೀನ ।**
**ಆಲೋಚ್ಯಾಥ ನಿಮಿತ್ತಂ ಪ್ರಶ್ನವಿಧಿಂ ಪ್ರಾರಭೇತ ಗುರುಭಕ್ತ್ಯಾ॥೨॥**

ಅಷ್ಟಮಂಗಲ ಪ್ರಶ್ನೆ ಹೇಳುವ ದೈವಜ್ಞನು ಸ್ನಾನಮಾಡಿ, ನಿರ್ಮಲವಾದ ಬಿಳಿವಸ್ತ್ರವನ್ನು ಉಟ್ಟುಕೊಂಡು, ಭಸ್ಮಧಾರಣೆ ಅಥವಾ ತನ್ನ ಸಂಪ್ರದಾಯದಂತೆ ಗೋಪಿಚಂದನ ಧಾರಣೆ ಮಾಡಿ, ಪೂರ್ವ ದಿಕ್ಕಿಗೆ ಮುಖಮಾಡಿ ಕೂತು ಸ್ವಸ್ಥಚಿತ್ತನಾಗಿ ತನ್ನ ಗುರುವನ್ನು ಭಕ್ತಿಯಿಂದ ನೆನಸಿ, ಅಷ್ಟಮಂಗಲ ಪ್ರಶ್ನ

ವಿಧಾನವನ್ನು ಪ್ರಾರಂಭಿಸಬೇಕು. ಆ ಕಾಲದಲ್ಲಿ ನಡೆಯುತ್ತಿರುವ ನಿಮಿತ್ತಗಳನ್ನು ತಿಳಿಯಬೇಕು.

**ಅನಾಸನ್ನೇ ತು ಸಮಯೋ ಮಧ್ಯಾಹ್ನೋದಯಯೋ ರವೇಃ ।**
**ಪ್ರಶ್ನಕರ್ಮ ಹಿ ಕರ್ತವ್ಯಂ ಸುಪ್ರಸನ್ನೇ ದಿವಾಕರೇ ॥೩॥**

ಅಷ್ಟಮಂಗಲ ಪ್ರಶ್ನೆಯನ್ನು ಇಡುವ ಕಾಲವು ಸೂರ್ಯೋದಯದ ನಂತರ ಮಧ್ಯಾಹ್ನದ ಒಳಗೆ ಸೂರ್ಯನು "ಸುಪ್ರಸನ್ನ" ಅಂದರೆ ಪ್ರಕಾಶಮಾನನಾಗಿ ಇರುವಾಗ ಆಗಬೇಕು.

**ಪ್ರಶ್ನಾನುಷ್ಠಾನಸಂಭಾರಸಂಭೃತೌ ಪ್ರಾಕ್ತು ಭಸ್ಮನಃ ।**
**ಆನೀತಿರ್ವ್ಯತಿದಾರ್ತಸ್ಯ ದೀಪಸ್ಯ ತು ಶುಭಪ್ರದಾ ॥೪॥**

ಪ್ರಶ್ನೆ ನಡೆಯುವ ಸ್ಥಳದಲ್ಲಿ, ಪ್ರಶ್ನೆಗೆ ಬೇಕಾದ ಸಾಧನಗಳನ್ನು ತರುವಾಗ ಮೊದಲು ವಿಭೂತಿ ತಂದರೆ ಅದು ಅಶುಭಫಲ ಸೂಚಿಸುತ್ತದೆ. ಮೊದಲು ದೀಪ ತಂದರೆ ಅದು ಶುಭಫಲ ಸೂಚಿಸುತ್ತದೆ.

**ಸರ್ವಪ್ರಶ್ನೇಷು ಸರ್ವೇಷು ಕರ್ಮಸ್ವಪಿ ವಿಶೇಷತಃ ।**
**ಪ್ರಸಾದೇನೈವ ದೀಪಸ್ಯ ಭವಿಷ್ಯಚ್ಛುಭಮಾದಿಶೇತ್ ॥೫॥**

ಸಕಲ ಪ್ರಶ್ನೆಗಳಲ್ಲಿ. ಅಲ್ಲದೇ ಸಕಲ ಕರ್ಮಗಳಲ್ಲಿಯೂ ದೀಪವು ಶುಭ ಸೂಚಕ ಆಗಿದೆ. ದೀಪದ ಜ್ಯೋತಿಯು ಶಾಂತ ಹಾಗೂ ಶುಭ್ರವಾಗಿದ್ದರೆ, ಇದು ಭವಿಷ್ಯದಲ್ಲಿ ಉತ್ತಮ ಫಲ ಸೂಚಕ ಆಗುತ್ತದೆ.

**ವಾಮಾವರ್ತೋ ಮಲಿನಕಿರಣಃ ಸಂಸ್ಫುಲಿಂಗೋಲ್ಪಮೂರ್ತಿಃ**
**ಕ್ಷಿಪ್ರಂ ನಾಶಂ ವ್ರಜತಿ ವಿಮಲಸ್ನೇಹವರ್ತ್ಯನ್ವಿತೋಽಪಿ । ದೀಪಃ**
**ಪಾಪಂ ಕಥಯತಿ ಫಲಂ ಶಬ್ದವಾನ್ ವೇಪಥುಶ್ಚ ವ್ಯಾಕೀರ್ಣಾ-**
**ರ್ಚಿರ್ವಿಮಲಮಸಕೃದ್ಯಶ್ಚ ನಾಶಂ ಪ್ರಯಾತಿ ॥೬॥**

**ದೀಪದ ಅಶುಭ ಲಕ್ಷಣಃ**-ಪ್ರಶ್ನಕಾಲದಲ್ಲಿ ಬೆಳಗಿಸಿದ ದೀಪದ ಜ್ವಾಲೆಯು. 1. ಎಡದಿಕ್ಕಿಗೆ ಸುತ್ತುತ್ತಿದ್ದರೆ. 2. ಕಿರಣಗಳು ಶುಭ್ರವಾಗಿರದೆ ಮಲಿನವಾಗಿದ್ದರೆ. 3. ಪಟಪಟ ಶಬ್ದದಿಂದ ಕಿಡಿ ಕಾರುತ್ತಿದ್ದರೆ. 4. ಜ್ವಾಲೆಯು ಚಿಕ್ಕದಾಗಿ ಇದ್ದರೆ. 5. ದೀಪದ ಬತ್ತಿಯು ಉತ್ತಮವಿದ್ದು, ಎಣ್ಣೆಯು ನಿರ್ಮಲವಾಗಿದ್ದರೂ ದೀಪ ನಂದಿಹೋದರೆ. 6. ಹೊತ್ತಿಸಿದ ಹಾಗೆ ಪುನಃ ಪುನಃ ನಂದಿ

ಹೋದರೆ, 7. ದೀಪ ಹಚ್ಚಿದ ಕೂಡಲೇ ಜ್ವಾಲೆಯು ಇಬ್ಭಾಗವಾದರೆ, 8. ಪಟ-ಪಟ ಎಂದು ಶಬ್ದವಾದರೆ, 9. ಗಾಳಿ ಇಲ್ಲದೆ ಜ್ವಾಲೆಯು ಅತ್ತಿತ್ತ ತೂಗುತ್ತಿದ್ದರೆ, ಇವೆಲ್ಲ ಅಶುಭ ಫಲ ಸೂಚಿಸುತ್ತದೆ.

**ದೀಪಃ ಸಂಹತಮೂರ್ತಿರಾಯತತನುರ್ನಿರ್ವೇಪಥುರ್ದೀಪ್ತಿಮಾನ್**
**ನಿಶ್ಶಬ್ದೋ ರುಚಿರಃ ಪ್ರದಕ್ಷಿಣಗತಿರ್ವೈಡೂರ್ಯಹೇಮದ್ಯುತಿಃ ।**
**ಲಕ್ಷ್ಮೀಂ ಕ್ಷಿಪ್ರಮಭಿವ್ಯನಕ್ತಿ ರುಚಿರಾಂ ಯಶ್ಚೋಚ್ಚಿಖೋ ದೃಶ್ಯತೇ**
**ಶೇಷಂ ಲಕ್ಷಣಮಗ್ನಿಲಕ್ಷಣಸಮಂ ಯೋಜ್ಯಂ ಯಥಾ ಯುಕ್ತಿತಃ॥**

ದೀಪದ ಶುಭ ಲಕ್ಷಣಃ-ದೀಪದ ಜ್ವಾಲೆಯು ಶುಭ್ರವಾಗಿ, ಉದ್ದವಾಗಿ ಉರಿಯುತ್ತಿದ್ದರೆ, 2. ಜ್ವಾಲೆಯು ಬಲಬದಿಗೆ ತಿರುಗುತ್ತಿದ್ದರೆ, 3. ಜ್ವಾಲೆಯು ನಡುಗದೇ ಪ್ರಕಾಶಮಾನವಾಗಿ ಇದ್ದರೆ, 4. ಶಬ್ದವಿಲ್ಲದೆ ಉರಿಯುತ್ತಿದ್ದರೆ, 5. ಜ್ವಾಲೆಯು ಆಕರ್ಷಕವಾಗಿ ಉರಿಯುವುದು ಕಂಡು ಬಂದರೆ. 6. ಜ್ವಾಲೆಯು ವೈಢೂರ್ಯ ಮತ್ತು ಬಂಗಾರದಂತೆ ಹೊಳಪು ಉಳ್ಳದ್ದು ಆಗಿದ್ದರೆ, 7. ಜ್ವಾಲೆಯು ಲಂಬವಾಗಿ, ಅಂಕುಡೊಂಕಾಗಿ ಇದ್ದರೆ, ಶುಭಸೂಚಕ ಹಾಗೂ ಅಭಿವೃದ್ಧಿ ನೀಡುತ್ತದೆ. ದೀಪದ ಇತರ ಲಕ್ಷಣಗಳನ್ನು ಕರ್ಮಕಾಂಡದಲ್ಲಿ ಅಗ್ನಿ ಲಕ್ಷಣ ಹೇಳುವಾಗ ಹೇಳಿರುತ್ತಾರೆ. ಅವುಗಳಲ್ಲಿ ಕೂಡಿಸಲಿಕ್ಕೆ ಯೋಗ್ಯವಾದುವುಗಳನ್ನು ಇಲ್ಲಿ ಯುಕ್ತಿಯಿಂದ ಸೇರಿಸಬೇಕು.

**ಸ್ನೇಹೋ ಯಸ್ಯೇಹ ದೇಹೋ ಭವತಿ ತದುದರೇ ವರ್ತಿನೀ ವರ್ತಿರಾತ್ಮಾ ಜ್ವಾಲಾಚಾಯುಸ್ತದೀಯೋ ವಿಮಲ್ಮಲಿನತೇ ಸೌಖ್ಯದುಃಖೇ ಕ್ರಮೇಣ । ಪಾತ್ರಂ ಗೇಹಂ ಸಮೀರೋ ಮೃದುಪರುಷಗುಣೋ ಬಂಧುಶತ್ರುಸ್ವರೂಪಃ ಪ್ರಷ್ಟುಃ ಪ್ರಾಯೇಣ ವೃತ್ತಂ ಪಿಶುನಯತಿ ಮಹಾದೇವತಾತ್ಮಾ ಸ ದೀಪಃ ॥೮॥**

1. ದೀಪವು ಪ್ರಚ್ಛಕನ ಇಡೀ ಚರಿತ್ರೆಯನ್ನು, 2. ದೀಪದಲ್ಲಿರುವ ಎಣ್ಣೆಯು ಪ್ರಚ್ಛಕನ ಶರೀರವನ್ನು, 3. ದೀಪದ ಬತ್ತಿಯು ಅವನ ಆತ್ಮ, 4. ದೀಪದ ಜ್ವಾಲೆಯು ಅವನ ಆಯುಷ್ಯವನ್ನು 5. ದೀಪದ ನಿರ್ಮಲತ್ವ ಅವನ ಸುಖ, 6. ದೀಪದಲ್ಲಿರುವ ಕೊಳಕು ಅವನ ದುಃಖ, 7. ದೀಪದ ಪಾತ್ರ ಅವನ ಮನೆ, 8. ಜ್ವಾಲೆಗೆ ತಾಗುವ ಮೃದು ಅಥವಾ ಒರಟಾದ ಗಾಳಿಯು ಅವನ

ಶತ್ರುಗಳು ಆಗಿರುತ್ತಾರೆ.  ಈ ರೀತಿ ದೇವತಾ ಸ್ವರೂಪ ಆಗಿರುವ ದೀಪದಿಂದ ಪ್ರಚ್ಛಕನ ವಿಚಾರಗಳನ್ನು ತಿಳಿಯಬೇಕು.

**ಪೂರ್ವಾಭಿಪ್ರೇತದಾತ್ರೀ ಶಿಖಿನಿ ಶಿಖಿಭಯಂ ದಕ್ಷಿಣೇ ಪ್ರಾಣ-**
**ಹಾನೀರ್ನೈಋತ್ಯಾಂ ವಿಸ್ಮೃತಿಃ ಸ್ಯಾದ್ವರುಣದಿಶಿ ಶಿಖಾ ಶಾಂತಿದಾ**
**ವಾಯುಕೋಣೇ । ಶೂನ್ಯಾ ಮೃತ್ಯುಂಜಯೀ ಸ್ಯಾದ್ಧನದದಿಶಿ**
**ಶಿಖಾ ಶಂ ವಿಧತ್ತೇ ಶಿವಾಖ್ಯೇ ವಹ್ನೇರೂರ್ಧ್ವಾ ಶಿಖೈಷಾ ವಿಶರತಿ**
**ವಪುಷೋಭೀಷ್ಟವಸ್ತೂನಿ ಸದ್ಯಃ ॥೯॥**

ದೀಪದ ಜ್ವಾಲೆಯು, 1. ಪೂರ್ವಾದಿಕ್ಕಿಗೆ ಸರಿಯುತ್ತಿದ್ದರೆ ಪ್ರಚ್ಛಕನ ಅಭಿಷ್ಟವು ಫಲಿಸುತ್ತದೆ. 2. ಆಗ್ನೇಯ ದಿಕ್ಕಿಗಿದ್ದರೆ ಅಗ್ನಿಭಯ ಸಂಭವಿಸುತ್ತದೆ. 3. ದಕ್ಷಿಣ ದಿಕ್ಕಿಗಿದ್ದರೆ ಪ್ರಾಣಹಾನಿ ಉಂಟಾಗುತ್ತದೆ. 4. ನೈಋತ್ಯ ದಿಕ್ಕಿಗಿದ್ದರೆ ವಿಸ್ಮೃತಿ ಉಂಟಾಗುತ್ತದೆ. 5. ಪಶ್ಚಿಮ ದಿಕ್ಕಿಗಿದ್ದರೆ ಶಾಂತಿ ಲಭಿಸುತ್ತದೆ. 6. ವಾಯುವ್ಯ ದಿಕ್ಕಿಗಿದ್ದರೆ ಅವನತಿ ನೀಡುತ್ತದೆ. 7. ಉತ್ತರ ದಿಕ್ಕಿಗಿದ್ದರೆ ಮೃತ್ಯುವನ್ನು ಜಯಿಸುತ್ತಾನೆ. 8. ಈಶಾನ್ಯ ದಿಕ್ಕಿಗಿದ್ದರೆ ಆರೋಗ್ಯ, ಸುಖ ನೀಡುತ್ತದೆ. 9. ಜ್ವಾಲೆಯು ಲಂಬವಾಗಿ ಮೇಲ್ಗಡೆ ಉರಿಯುತ್ತಿದ್ದರೆ ದೇಹ ಸುಖ ಮತ್ತು ಮನೋಭೀಷ್ಟಗಳ ಪೂರೈಕೆ ಸಂಭವಿಸುತ್ತದೆ.

**ಪ್ರಶ್ನಾರ್ಥಮಾಪಾದಿತಪತ್ರಪೂರ್ವಾನ್ ಛಿತ್ವಾ ಚ ಭೀತ್ವಾ ಗುಳಿ-**
**ಕಸ್ಥರಾಶೌ । ಪೃಷ್ಟ್ರಷ್ಟಮರ್ಕ್ಷೇ ಯದಿ ನಿಕ್ಷಿಪೇಚ್ಚೇತ್ಸದ್ಯೋ**
**ಮೃತಿಃ ಸ್ಯಾನ್ನ ತು ಜೀವದೃಷ್ಟೇ ॥೧೦॥**

ಪ್ರಶ್ನೆಗಾಗಿ ಅಲ್ಲಿಗೆ ತಂದಿದ್ದ ವೀಳ್ಯದೆಲೆ ಮೊದಲಾದ ಪತ್ರಗಳನ್ನು ಅಥವಾ ಬೇರೆ ವಸ್ತುಗಳನ್ನು ಅಲ್ಲಿದ್ದವರು ಯಾರಾದರೂ ತುಂಡು ಮಾಡಿ ಅಥವಾ ಸಿಗಿದು ಪ್ರಶ್ನೆ ಕುಂಡಲಿಯ ಗುಳಿಕನಿರುವ ರಾಶಿಯಲ್ಲಿ ಅಥವಾ ಪ್ರಚ್ಛಕನ ಜನ್ಮ ರಾಶಿಯಿಂದ ಅಷ್ಟಮದಲ್ಲಿ ಇಟ್ಟರೂ. ಪ್ರಚ್ಛಕನಿಗೆ ಶೀಘ್ರ ಮರಣ ಸಂಭವಿಸುತ್ತದೆ ಎಂದು ತಿಳಿಯಬೇಕು. ಗುಳಿಕನಿಗೆ ಅಥವಾ ಅಷ್ಟಮರಾಶಿಗೆ ಗುರುದೃಷ್ಟಿ ಇದ್ದರೆ ಮರಣ ಸಂಭವಿಸುವುದಿಲ್ಲ.

**ಶುದ್ಧ ತಂಡುಲಸಂಪೂರ್ಣಪ್ರಸ್ಥದೀಪಾದ್ಯಲಂಕೃತೇ ।**
**ಸಮೇ ಸುಮೃಷ್ಟಸಂಸಿಕ್ತೇ ಚಕ್ರಂ ಲಿಖತು ಭೂತಲೇ ॥೧೧॥**

ಪ್ರಶ್ನ ಕುಂಡಲಿ ಬರೆಯುವ ವಿಧಾನ:-ಪ್ರಶ್ನ ಕುಂಡಲಿ ಬರೆಯುವ ಸ್ಥಳವು, ಶುದ್ಧವಾದ ಅಕ್ಕಿಯಿಂದ ತುಂಬಿದ ಪಾತ್ರೆ ಮತ್ತು ದೀಪ ಇವುಗಳಿಂದ ಕೂಡಿದ್ದು ಅಲಂಕರಿಸಲ್ಪಟ್ಟ ಸ್ಥಳ ಆಗಿರಬೇಕು. ಕುಂಡಲಿ ಬರೆಯುವ ಸ್ಥಳವು ಸಮತಟ್ಟಾಗಿ ಸಾರಿಸಲ್ಪಟ್ಟು ಶುದ್ಧಮಾಡಲ್ಪಟ್ಟ ಸ್ಥಳ ಆಗಿರಬೇಕು. ಈ ರೀತಿಯ ಭೂಮಿಯಲ್ಲಿ ನೆಲದ ಮೇಲೆ ಪ್ರಶ್ನ ಚಕ್ರವನ್ನು ಬರೆಯಬೇಕು.

ಹಸ್ತಪ್ರಮಾಣೇ ಚತುರಶ್ರಖಂಡೇ ಷಡಂಗುಲಾಂಶೈರ್ವಿಭಜೇದ್ದ-ಶಾನೀ । ಚತುರ್ದಳಂ ಪದ್ಮಮಿಹಾಸ್ತು ಮಧ್ಯೇ ಚತುರ್ಭಿರನ್ಯಾ-ನ್ಯಜಪೂರ್ವಭಾನೀ ॥೧೨॥

ಒಂದು ಕೈ ಉದ್ದದ ಅಂದರೆ 24 ಅಂಗುಲದ ದಂಡದಿಂದ 6-6ಅಂಗುಲದ ಅಂತರವಿಟ್ಟು ಚೌಕವಾಗಿ ನೆಟ್ಟಗೆ 5ಗೆರೆ, ಅಡ್ಡ 5ಗೆರೆ ನೆಲದ ಮೇಲೆ ಹಾಕಿದರೆ ಅದರಲ್ಲಿ 6.6 ಅಂಗುಲ ಪ್ರಮಾಣ ಉಳ್ಳ 12 ರಾಶಿಗಳು, ಮತ್ತು ನಡುವಿನಲ್ಲಿ ನಾಲ್ಕು ದಳ ಉಳ್ಳ ಪದ್ಮವೂ ಉಂಟಾಗುತ್ತದೆ.

ಕೇಚಿನ್ನಿಂದಂತಿ ದೈವಜ್ಞಾ ಭಸ್ಮನಾ ಚಕ್ರಲೇಖನಮ್ ।
ತಥಾಪಿ ತತ್ರ ಭಸ್ಮೈವ ಗೃಹ್ಣಂತಿ ಬಹವೋಧುನಾ ॥೧೩॥

ದೈವಜ್ಞನು ಭಸ್ಮದಿಂದ ಕುಂಡಲಿ ಬರೆಯ ಬಾರದು ಎಂದು ಕೆಲವರು ಹೇಳುತ್ತಾರೆ. ಆದರೆ ಹೆಚ್ಚು ಜನರು ಭಸ್ಮದಿಂದಲೇ ಚಕ್ರವನ್ನು ಬರೆಯುತ್ತಾರೆ.

ಪ್ರದಕ್ಷಿಣತಯಾ ಕಾರ್ಯಂ ರಾಶಿಚಕ್ರವಿಲೇಖನಮ್ ।
ಅನುಲೋಮವಿಲೋಮೇನ ಲೇಖನೇ ವಿಘ್ನಸಂಭವಃ ॥೧೪॥

ಅಷ್ಟಮಂಗಲ ಪ್ರಶ್ನೆಯನ್ನು ಇಡಲು ರಾಶಿಚಕ್ರವನ್ನು ಬರೆಯುವಾಗ ಬಲಬದಿಯಿಂದ ಸುತ್ತಾಗಿ ಬರೆಯಬೇಕು. ಅಪ್ರದಕ್ಷಿಣವಾಗಿ ಬರೆದರೆ ಅಥವಾ ಹಿಂದಕ್ಕೆ-ಮುಂದಕ್ಕೆ ಬರೆದರೆ ಆ ಪ್ರಶ್ನೆಯಲ್ಲಿ ಎಣಿಸಿದ ಕಾರ್ಯಕ್ಕೆ ಅಡ್ಡಿ-ಆತಂಕ ಉಂಟಾಗುತ್ತದೆ ಎಂದು ತಿಳಿಯಬೇಕು. ಅಷ್ಟಮಂಗಲ ಪ್ರಶ್ನೆಯ ಕುಂಡಲಿಯನ್ನು ದೈವಜ್ಞನ ಶಿಷ್ಯನು ಬರೆಯಬೇಕು.

ಸ್ಥೂಲರೇಖಾ ಸುಖಕರೀ ಸೂಕ್ಷ್ಮಾ ದುಃಖಪ್ರದಾಯಿನೀ ।
ರೇಖಾಚ್ಛೇದೋ ಭವೇತ್ ಪ್ರಷ್ಟುಃ ಸುಖಕಾರ್ಯವಿಘಾತಕಃ ॥

ಚಕ್ರವನ್ನು ಬರೆದ ರೇಖೆಗಳು ದಪ್ಪವಾಗಿದ್ದರೆ ಪ್ರಚ್ಛಕನಿಗೆ ಸುಖ ಉಂಟಾಗುತ್ತದೆ. ಗೆರೆಯು ಸಪುರವಾಗಿದ್ದರೆ ದುಃಖವನ್ನು ಉಂಟು ಮಾಡುತ್ತದೆ. ಗೆರೆ ಬರಿಯುವಾಗ ನಡುವಿನಲ್ಲಿ ಭಿನ್ನವಾದರೆ ಪ್ರಚ್ಛಕನ ಸುಖನಾಶ ಅಥವಾ ಕಾರ್ಯ ಹಾನಿ ಸಂಭವಿಸುತ್ತದೆ.

**ಲಿಖಿತಾ ಸೌಮ್ಯರೇಖಾ ಪ್ರಾಗ್ಯದಿ ನೂನಂ ಧನಾಗಮಃ । ವಾರುಣೀ**
**ಯದಿ ರೋಗಾಪ್ತಿರೈಂದ್ರೀ ಚೇತ್ಸಂತತಿರ್ಭವೇತ್ ॥೧೬॥**
**ಯಾಮ್ಯರೇಖಾ ಯದಿ ಭವೇನ್ಮರಣಾಯೈವ ಪೃಚ್ಛತಾಮ್ ॥೧೭॥**

1. ಪ್ರಶ್ನ ಕುಂಡಲಿ ಬರೆಯುವಾಗ ಮೊದಲು ಉತ್ತರದ ರೇಖೆಯನ್ನು ಬರೆದರೆ ಧನಲಾಭ ಉಂಟಾಗುತ್ತದೆ. 2. ಪಶ್ಚಿಮದ ರೇಖೆಯನ್ನು ಮೊದಲು ಬರೆದರೆ ಪ್ರಚ್ಛಕನಿಗೆ ರೋಗಪ್ರಾಪ್ತಿ ಆಗುತ್ತದೆ. 3. ಪೂರ್ವರೇಖೆಯನ್ನು ಮೊದಲು ಬರೆದರೆ ಸಂತತಿಲಾಭ ಆಗುತ್ತದೆ. 4. ದಕ್ಷಿಣದ ರೇಖೆಯನ್ನು ಮೊದಲು ಬರೆದರೆ ಅದು ಪ್ರಚ್ಛಕನಿಗೆ ಮರಣ ಸೂಚಿಸುತ್ತದೆ.

**ಚಕ್ರಸ್ಯ ಯತ್ರ ನಿಮ್ನತ್ವಮೌನ್ನತ್ಯಂ ವಾಪಿ ದೃಶ್ಯತೇ ।**
**ಪ್ರಷ್ಟುರ್ನಿವಾಸಭೂಮಿಶ್ಚ ತತ್ರ ತತ್ರ ನತೋನ್ನತಾ ॥೧೮॥**

ನೆಲದ ಮೇಲೆ ಬರೆದ ಚಕ್ರದ ಯಾವ ಭಾಗದಲ್ಲಿ ಏರು ಅಥವಾ ತಗ್ಗು ಇತ್ಯಾದಿ ಉಂಟೆಂದು ತಿಳಿಯಬೇಕು. ಪ್ರಚ್ಛಕನ ಭೂಮಿಯಲ್ಲಿ ಅದೇ ರೀತಿ ಚಕ್ರವು ಸೂಚಿಸುವ ದಿಕ್ಕಿನಲ್ಲಿ ಏರು-ತಗ್ಗು ಇದೆ ಎಂದು ತಿಳಿಯಬೇಕು.

**ಚಕ್ರೇ ಯತ್ರ ತೃಣಾನಿ ತತ್ರ ತರವಸ್ತತ್ರಾಂಬುಸಿಕ್ತೇ ಜಲಂ ಗ್ರಾವಾ ಯತ್ರ ಶಿಲೇಹ ಯತ್ರ ಸಿಕತಾಸ್ತತ್ರ ಸ್ಥಲಂ ಚೋನ್ನತವ್ । ಕೇರಾ ವಾ ಖಲು ನಾಲಿಕೇರಸದೃಶಾಕಾರಾಃ ಪರೇ ಭೂರುಹೋ ವಲ್ಮೀಕೋತ್ರ ಪಿಪೀಲಿಕಾಹೃತಮೃದೋ ಯತ್ರ ಕ್ಷಿತೌ ಪೃಚ್ಛತಾಮ್ ॥೧೯॥**

1. ಚಕ್ರ ಬರೆದ ನೆಲದಲ್ಲಿ ಯಾವ ಬದಿಯಲ್ಲಿ ನೆಲದ ಮೇಲೆ ಹುಲ್ಲು ಇತ್ಯಾದಿಗಳು ಮೊಳತಿರುತ್ತವೋ, ಪ್ರಚ್ಛಕನ ಭೂಮಿಯು ಆ ಬದಿಯಲ್ಲಿ ಮರ ಮಟ್ಟುಗಳಿವೆ ಎಂದು ತಿಳಿಯಬೇಕು. 2. ನೀರಿನ ಪಸೆ ಅಥವಾ ನೀರಾಗಲೀ ಇದ್ದರೆ ಆ ಬದಿಯಲ್ಲಿ ನೀರಿನ ತೋಡು ಅಥವಾ ಹೊಂಡ, ಹೆಚ್ಚು ನೀರು ನಿಂತಿದ್ದರೆ ಕೆರೆ, ಪ್ರಚ್ಛಕನ ಭೂಮಿಯು ಆ ಬದಿಯಲ್ಲಿ ಇರುತ್ತದೆ. 3. ಚಕ್ರದ ನೆಲದಲ್ಲಿ

ಬಿಳಿಕಲ್ಲು, ಮೊನಚಾದ ಕಲ್ಲು ಇತ್ಯಾದಿ ಇದ್ದರೆ ಪ್ರಚ್ಛಕನ ಭೂಮಿಯ ಆ ಬದಿಯಲ್ಲಿ ಅವೇತರದ ಕಲ್ಲು-ಬಂಡೆಗಳಿವೆ ಎಂದು ತಿಳಿಯಬೇಕು. 4. ಚಕ್ರದ ನೆಲದಲ್ಲಿ ಹೊಗೆ, ಸೇಡಿ ಇದ್ದರೆ ಅವುಗಳು ಕೂಡಾ ಆ ಭೂಮಿಯ ಆಯಾ ಬದಿಯಲ್ಲಿ ಇರುತ್ತದೆ. 5. ಚಕ್ರದ ನೆಲದಲ್ಲಿ ಉದ್ದವಾದ ಮೊಳೆತಿರುವ ಹುಲ್ಲಿನಂತೆ ಇರುವ ಸಸಿಗಳು ಕಂಡು ಬಂದರೆ, ಭೂಮಿಯ ಆ ಬದಿಯಲ್ಲಿ ತೆಂಗಿನ ಮರ, ತಾಳೆ ಮರ ಇತ್ಯಾದಿ ಇರುತ್ತವೆ. 6. ಚಕ್ರದ ಯಾವುದಾದರೊ ಒಂದು ಬದಿಯಲ್ಲಿ ತೂತು ಇದ್ದು ಇರುವೆಗಳು ಆ ತೂತಿನಿಂದ ಮಣ್ಣನ್ನು ಮೇಲಕ್ಕೆ ಎತ್ತಿ ಹಾಕಿದರೆ ಪ್ರಚ್ಛಕನ ಭೂಮಿಯ ಆ ಭಾಗದಲ್ಲಿ ಹುತ್ತ ಅಥವಾ ಬಿಲ ಇತ್ಯಾದಿಗಳಿವೆ ಎಂದು ತಿಳಿಯಬೇಕು.

**ಸಂಸ್ಪರ್ಶನಾದ್ಯೈರಪಿ ಚಕ್ರಕರ್ತುಃ ಪ್ರಷ್ಟುಃ ಕ್ಷಿತೇರ್ಲಕ್ಷ್ಮ ವಿಚಾರಣೀಯಮ್ । ವಿಲಿಖ್ಯ ಚಕ್ರಂ ಪ್ರದದಾತಿ ಕಿಂಚಿದ್ ದ್ರವ್ಯಂ ಪರಸ್ಮೈಯದಿ ಭೂಮಿರೇಷಾ ॥೨೦॥**

ಚಕ್ರವನ್ನು ಬರೆಯುವವನು ಮುಟ್ಟುವ ಲಕ್ಷಣಗಳಿಂದಲೂ ಪ್ರಚ್ಛಕನ ಭೂಮಿಯ ಲಕ್ಷಣಗಳನ್ನು ಊಹಿಸಿಕೊಳ್ಳಬೇಕು. ಚಕ್ರ ಬರೆಯುತ್ತಿರುವಾಗ ಆಕಸ್ಮಿಕವಾಗಿ ಬೇರೊಬ್ಬನು ಒಂದು ಯಾವುದಾದರೂ ದಿಕ್ಕಿನಿಂದ, ಆತನಿಂದ ವಸ್ತುವನ್ನು ಪಡಕೊಂಡರೆ ಪ್ರಚ್ಛಕನ ಆ ಭಾಗದ ಭೂಮಿಯು ಪರಾಧೀನ ಆಗುತ್ತದೆ ಎಂದು ತಿಳಿಯಬೇಕು. ಅದೇ ರೀತಿ ಚಕ್ರವನ್ನು ಬರೆಯುವವನು ಯಾವುದಾದರೂ ವಸ್ತುವನ್ನು ಮತ್ತೊಬ್ಬನಿಂದ ಪಡಕೊಂಡರೆ ಪ್ರಚ್ಛಕನಿಗೆ ಆ ಬದಿಯ ಭೂಮಿಲಾಭ ಆಗುತ್ತದೆ ಎಂದು ತಿಳಿಯಬೇಕು.

**ಪರಸ್ವತಾಮೇಷ್ಯತಿ ಯತ್ಪರಸ್ಮಾದಾದಾನಮನ್ಯಕ್ಷಿತಿಲಾಭಶಂಸಿ । ಯದ್ಯುದ್ಧರೇತ್ಸ್ವಾಭಿಮುಖಂ ಪ್ರಸಾರ್ಯ ಹಸ್ತಂ ನಗಾಃ ಸ್ಯುರ್ಯದಿ ಸಾಂಗುಲೀಯಃ ॥೨೧॥ ಕರಃ ಸ ವಲ್ಲೀಪರಿವೇಷ್ಟಿತಾಂಗಾ ಗ್ರೀವಾ ವಿಭೂಷಾಲಭನೇಪಿ ತದ್ವತ್ । ಶಾಖಾವಿಹೀನಾಸ್ತರವೋಂ-ಗುಲೀನಾಮಾಕುಂಚನೇ ಸ್ಥಾಣವ ಏವ ಮುಷ್ಟೌ ॥೨೨॥**

ಚಕ್ರ ಬರೆಯುವವನು ಯಾವುದಾದರೂ ಒಂದು ಕಡೆಯಲ್ಲಿ ಚಕ್ರ ಬರೆಯುತ್ತಿರುವಾಗ ತನ್ನ ಎರಡು ಕೈಗಳನ್ನು ಅಥವಾ ಒಂದು ಕೈಯನ್ನು ಮುಂದೆ ಮಾಡಿ ಮೇಲಕ್ಕೆ ಎತ್ತಿದರೆ ಆ ಸ್ಥಳದಲ್ಲಿ ಉದ್ದವಾಗಿ ಬೆಳೆದ ಮರ ಉಂಟೆಂದು

ತಿಳಿಯಬೇಕು. ಆ ಕೈಯಲ್ಲಿ ಉಂಗುರ ಇದ್ದರೆ ಅಥವಾ ಅವನು ತನ್ನ ಕುತ್ತಿಗೆಯಲ್ಲಿರುವ ಸರವೇ ಮೊದಲಾದ ಆಭರಣ ಮುಟ್ಟಿದರೆ, ಆ ಭೂಮಿಯಲ್ಲಿರುವ ಮರಗಳಿಗೆ ಬಳ್ಳಿಯು ಸುತ್ತಿಕೊಂಡು ಇದೆ ಎಂದು ತಿಳಿಯಬೇಕು. ಚಕ್ರ ಬರೆಯುವವನು ಎತ್ತಿದ ಕೈಯು ಮುಷ್ಟಿ ಉಳ್ಳದ್ದಾದರೆ ಅಂದರೆ ಬೆರಳುಗಳನ್ನು ಮಡಚಿದ್ದರೆ ಅಲ್ಲಿರುವ ಮರವು ಕೊಂಬೆಗಳಿಲ್ಲದ್ದು ಎಂದು ತಿಳಿಯಬೇಕು.

**ಮುಖರೋಮಾರ್ದ್ದನೇಭಿನ್ನಂ ಸ್ಪೃಶೇದ್ಯದಿ ವದೇತ್ಸಕಂಟಕಾನ್ ವೃಕ್ಷಾನ್ । ನಾ ಸಾ ಶ್ರವಸೋಃ ರಂಧ್ರಸ್ಪರ್ಶೇ ತು ವಿಲಂ ಭುಜಂ-ಗಮಾಖೂನಾಮ್ ॥೨೩॥**

ಚಕ್ರ ಬರೆಯುವವನು ತನ್ನ ಮುಖದಲ್ಲಿರುವ ಗಡ್ಡಗಳನ್ನು ಸವರಿದರೆ ಆ ಭೂಮಿಯಲ್ಲಿ ಮುಳ್ಳುಗಳು ಉಳ್ಳ ಮರಗಳಿವೆ ಎಂದು ತಿಳಿಯಬೇಕು. ಆತನು ತನ್ನ ಮೂಗಿನ ಅಥವಾ ಕಿವಿಯ ರಂಧ್ರಗಳನ್ನು ಮುಟ್ಟಿದರೆ ಆ ಭೂಮಿಯಲ್ಲಿ ಇಲಿಗಳ ಅಥವಾ ಹಾವಿನ ಬಿಲಗಳು ಇವೆ ಎಂದು ಊಹಿಸಿ ಹೇಳಬೇಕು.

**ಕೇಶಾನ್ ವಿಶ್ಲಥಿತಾಂಶ್ಚ ರೋಮ ಮುಖಜಂ ಯದ್ವಾ ಸ್ಪೃಶೇನ್ನಿರ್ದಿಶೇನ್ಮುಂಜೋಶೀರಕುಶಾದಿಕಾನಪಿ ನಸೋಃ ವಲ್ಮೀಕವಾಮ-ರ್ಶನೇ । ಮೇಢ್ರಕ್ರೋಡದೃಶಾಂ ಕುಚಾಸ್ಯವಿಲಯೋಶ್ಚಾಮರ್ಶ-ನೇಂತರ್ಜಲಂ ಪ್ರಸ್ಪೃಷ್ಟವರ್ಮಾಸ್ತ್ವನಿಶೋದ್ಯದಂಬು ಕಥಯೇತ್ ಸ್ವಿನ್ನಾಂಗಸಂಸ್ಪರ್ಶನೇ ॥೨೪॥**

ಚಕ್ರ ಬರೆಯುವವನು ಬಿಚ್ಚಿಹೋವ ತಲೆಗೂದಲನ್ನು ಅಥವಾ ಗಡ್ಡವನ್ನು ತಿಕ್ಕುತ್ತಿದ್ದರೆ ಪ್ರಚ್ಛಕನ ಆ ಭಾಗದ ಭೂಮಿಯಲ್ಲಿ ದರ್ಭೆಹುಲ್ಲು ಅಥವಾ ಅದೇ ರೀತಿಯ ಇನ್ನಿತರ ಹುಲ್ಲು ಇರುತ್ತದೆ. ಆತನು ಮೂಗಿನ ರಂಧ್ರವನ್ನು ಮುಟ್ಟಿದರೆ ಭೂಮಿಯ ಆ ಭಾಗದಲ್ಲಿ ಹಾವಿನ ಹುತ್ತ ಇರುತ್ತದೆ. ಆತನು ಹೊಟ್ಟೆ, ಲಿಂಗ, ಮೊಲೆ, ಕಣ್ಣು, ಬಾಯಿ ಇತ್ಯಾದಿಗಳನ್ನು ಚಕ್ರದ ಯಾವ ಬದಿ ಬರೆಯುವಾಗ ಮುಟ್ಟುತ್ತಾನೋ, ಪ್ರಚ್ಛಕನ ಭೂಮಿಯ ಆ ಭಾಗದಲ್ಲಿ ಒಳಗಡೆ ನೀರು ಉಂಟೆಂದು ತಿಳಿಯಬೇಕು. ಆತನು ಬೆವರನ್ನು ಚಕ್ರದ ಯಾವ ಭಾಗ ಬರೆಯುವಾಗ ತಿಕ್ಕುತ್ತಾನೋ ಭೂಮಿಯ ಆ ಭಾಗದಲ್ಲಿ ನೀರು ಜಿನುಗುತ್ತಿದೆ ಎಂದು ಹೇಳಬೇಕು.

**ಕಕ್ಷಾಪಾನಸ್ಪರ್ಶನೇ ವಾರಿ ದುಷ್ಟಂ ಬಾಹೂನ್ನತ್ಯಾಂ ಭೂರುಹೋ-**

**ತೀವ ದೀರ್ಘಾಃ । ಹಸ್ತಾನತ್ಯಾಂ ತತ್ರ ವೃಕ್ಷೋತಿಖರ್ವೋಃ ಲೋಹಾನಿ ಸ್ಯುಃ ಸ್ಪರ್ಶನೇ ದನ್ತಖಾನಾವಾಕ್ ॥೨೫॥**

ಚಕ್ರ ಬರೆಯುವವನು ಯಾವ ಭಾಗದ ಚಕ್ರ ಬರೆಯುವಾಗ ತನ್ನ ಕಂಕು ಳನ್ನು ಅಥವಾ ಗುದವನ್ನು ಮುಟ್ಟಿದರೆ ಪ್ರಚ್ಛಕನ ಭೂಮಿಯ ಆ ಭಾಗದಲ್ಲಿ ಕೊಳಕು ನೀರು ಅಥವಾ ಚರಂಡಿ ಉಂಟೆಂದು ಹೇಳಬೇಕು. ಆತನು ತನ್ನ ಕೈಗ ಳನ್ನು ಸರಿಯಾಗಿ ಮೇಲಕ್ಕೆ ಎತ್ತಿದರೆ ಆ ಸ್ಥಳದಲ್ಲಿ ಉದ್ದವಾಗಿ ಬೆಳೆದ ಮರಗಳು ಇವೆ ಎಂದು ತಿಳಿಯಬೇಕು. ಅದರಂತೆಯೇ ಆತನು ಕೈಯನ್ನು ತಗ್ಗಿಸಿದರೆ ಅಲ್ಲಿ ಸಸಿಗಳು ಅಥವಾ ಗಿಡ್ಡವಾದ ಮರಗಳಿವೆ ಎಂದು ತಿಳಿಯಬೇಕು. ಆತನು ಯಾವ ಬದಿಯ ಚಕ್ರವನ್ನು ಬರೆಯುವಾಗ ಹಲ್ಲನ್ನು ಅಥವಾ ಉಗುರನ್ನು ಮುಟ್ಟು ತ್ತಾನೋ ಪ್ರಚ್ಛಕನ ಭೂಮಿಯ ಆ ಭಾಗದಲ್ಲಿ ಲೋಹವಿದೆ ಎಂದು ತಿಳಿಯ ಬೇಕು.

**ಜಾನ್ವಾದಿಕೇಂಗೇಸ್ಥಿಯುತೇ ಸ್ಪೃಶೇಚ್ಚೇತ್ ಪಾಷಾಣಜಾಲೈರ್ನಿ-ಚಿತಾಸ್ಥಿಭಿಶ್ಚ । ನಾಭ್ಯಾದಿನಿಮ್ನಾವಯವಾಭಿಮರ್ಶೇ ಶ್ವಭ್ರಾನ್ವಿತಾ ಪೃಚ್ಛಕಭೂಃ ಸಕುಲ್ಯಾ ॥೨೬॥**

ಚಕ್ರ ಬರೆಯುವವನು ತನ್ನ ಮೊಣಕಾಲಿನ ಗಂಟು ಅಥವಾ ಎಲುಬು ಪ್ರಧಾನ ಆಗಿರುವ ಅಂಗವನ್ನು ಮುಟ್ಟಿದರೆ, ಪ್ರಚ್ಛಕನ ಭೂಮಿಯಲ್ಲಿ ಕಲ್ಲು, ಎಲುಬು ಇವೆ ಎಂದು ತಿಳಿಯಬೇಕು. ಆತನು ಯಾವ ಬದಿಯ ಚಕ್ರ ಬರೆಯು ವಾಗ ನಾಭಿ ಅಥವಾ ದೇಹದ ತಗ್ಗಾಗಿರುವ ಜಾಗವನ್ನು ಮುಟ್ಟುತ್ತಾನೋ ಪ್ರಚ್ಛಕನ ಭೂಮಿಯ ಆ ಭಾಗದಲ್ಲಿ ಹೊಂಡ, ಮಾಟೆ ಇತ್ಯಾದಿ ಇವೆ ಎಂದು ಅಥವಾ ನೀರು ಹರಿಯಲು ಮಾಡಿದ ತೋಡು ಉಂಟೆಂದು ತಿಳಿಯಬೇಕು.

**ಸ್ವಪೃಷ್ಠಭಾಗಸ್ಥನತಪ್ರದೇಶಸ್ಪರ್ಶೇನ ಕುಲ್ಯಾಂ ಪ್ರವದೇನ್ನದೀಂ ವಾ । ರಹಸ್ಯಲಕ್ಷ್ಮೇತ್ಯಥ ತತ್ರ ಸಂಗಾದ್ ದೂತಾಶ್ರಯಂ ಕಿಂಚನ ಲಕ್ಷ್ಮವಕ್ಷೇ ॥೨೭॥**

ಚಕ್ರ ಬರೆಯುವವನು ಯಾವ ಬದಿಯ ಚಕ್ರ ಬರೆಯುವಾಗ ತನ್ನ ಬೆನ್ನಿನ ತಗ್ಗಾದ ಸ್ಥಳವನ್ನು ಮುಟ್ಟಿ ಸವರುತ್ತಾನೋ ಪ್ರಚ್ಛಕನ ಭೂಮಿಯ ಆ ಭಾಗ ದಲ್ಲಿ ನೀರು ಹರಿಯುವ ತೋಡು ಅಥವಾ ಹೊಳೆ ಉಂಟೆಂದು ತಿಳಿಯಬೇಕು.

ಪ್ರಶ್ನಕಾಲದಲ್ಲಿ ಸಂಭವಿಸುವ ಲಕ್ಷಣಗಳು.

ದೃಶ್ಯಂತೇ ದಿಶಿ ಯತ್ರ ಯತ್ರ ಮನುಜಾ ದೂತಸ್ಯ ವಿಪ್ರಕ್ಸ್ಥಿತಾ ದಿಕ್ಪ್ರಾಪ್ತಸ್ವಾಸು ಗೃಹಾಣಿ ಸಂತಿ ಸದೃಶಾಂ ಜಾತ್ಯಾ ಚ ತೈಃ ಸಂಖ್ಯಯಾ। ಆಯಾನೇನ ಧನುಷ್ಮತೋತ್ರ ಹರಿತಿ ಸ್ಥಾನಂ ಚ ಶಾಸ್ತುರ್ವದೇದ್ದೇವ್ಯಾಸ್ತದ್ದಿಶಿ ಯೋಷಿತಃ ಕುಪ್ರಥುಕಾಯಾನೇ ಪಿಶಾಚಸ್ಥಿತಿಃ ॥೨೮॥ ವಿಪ್ರಾಯಾನೇ ಬ್ರಹ್ಮರಕ್ಷೋನಿವಾಸಶ್ಚೋರೋತ್ಥಾಪದ್ದುರ್ಮತೇರಾಗಮೇನ। ದೂತಸ್ಯೈತತ್ಸಂಭವೇದ್ಯದ್ದಿಶಾಯಾಂ ಪ್ರಷ್ಟುದ್ಧಾರ್ವಮ್ನಸ್ತತ್ಫಲಂ ತದ್ದಿಶಿ ಸ್ಯಾತ್ ॥ಇತಿ॥೨೯॥

ಪ್ರಶ್ನಕಾಲದಲ್ಲಿ 1. ಪ್ರಚ್ಛಕನು ಕೂತ ಅಥವಾ ನಿಂತ ಸ್ಥಳದಿಂದ ಅವನ ಸುತ್ತಲೂ ಪೂರ್ವಾದಿ ದಿಕ್ಕುಗಳಲ್ಲಿ ನಿಂತಿರುವ ಜನಸಂಖ್ಯೆಯಷ್ಟು ಮನೆಗಳು ಆಯಾ ದಿಕ್ಕಿನಲ್ಲಿ ಇವೆ ಎಂದು ಹೇಳಬೇಕು. ಅವುಗಳು ಆಯಾ ಜನರ ಜಾತಿಯವರ ಮನೆಗಳು ಆಗಿರುತ್ತವೆ. 2. ಪ್ರಶ್ನಕಾಲದಲ್ಲಿ ಯಾರಾದರೊಬ್ಬನು ಬಿಲ್ಲು-ಬಾಣ ಇತ್ಯಾದಿ ಆಯುಧಗಳನ್ನು ಹಿಡಿದು ಕೊಂಡು ಅಲ್ಲಿಗೆ ಬಂದರೆ ಅವನು ಬಂದ ದಿಕ್ಕಿನಲ್ಲಿ ಶಾಸ್ತಾದೇವತೆಯ ಮಂದಿರ ಉಂಟೆಂದು ತಿಳಿಯಬೇಕು. 3. ಪ್ರಶ್ನಕಾಲದಲ್ಲಿ ಅಲ್ಲಿಗೆ ಅಕಸ್ಮಾತ್ ಯಾವಳಾದರೂ ಒಬ್ಬಳು ಹೆಂಗಸು ಬಂದರೆ ಅವಳು ಬಂದ ದಿಕ್ಕಿನಲ್ಲಿ ದೇವಿಯ ಮಂದಿರ ಉಂಟೆಂದು ತಿಳಿಯಬೇಕು. 4. ಪ್ರಶ್ನಕಾಲದಲ್ಲಿ ಆವ್ಹಾನವಿಲ್ಲದೇ ಯಾರಾದರೂ ಕೆಟ್ಟ ಸ್ವಭಾವದ ಹುಡುಗರು ಬಂದರೆ, ಅವರು ಬಂದ ದಿಕ್ಕಿನಲ್ಲಿ ಪಿಶಾಚಾದಿ ದುಷ್ಟ ಶಕ್ತಿಗಳ ವಾಸ ಇದೆ ಎಂದು ತಿಳಿಯಬೇಕು. 5. ಪ್ರಶ್ನಕಾಲದಲ್ಲಿ ಯಾವುದಾದರೂ ಒಂದು ಬದಿಯಿಂದ ಬ್ರಾಹ್ಮಣನು ಅಲ್ಲಿಗೆ ಬಂದರೆ ಆ ದಿಕ್ಕಿನಲ್ಲಿ ಬ್ರಹ್ಮ ರಾಕ್ಷಸನ ವಾಸ ಇದೆ ಎಂದು ತಿಳಿಯಬೇಕು. 6. ಪ್ರಶ್ನಕಾಲದಲ್ಲಿ ಯಾವುದಾದರೂ ಬದಿಯಿಂದ ಕೆಟ್ಟ ಜನರು, ನೀಚರು ಅಥವಾ ವಂಚಕರು ಬಂದರೆ ಆ ದಿಕ್ಕಿನಲ್ಲಿ ಕಳ್ಳರು ಅಥವಾ ದರೋಡೆಕೋರರು ಇದ್ದಾರೆ ಎಂದು ತಿಳಿಯಬೇಕು.

ಈ ರೀತಿ ಪ್ರಚ್ಛಕನು ನಿಂತ ಅಥವಾ ಕೂತಸ್ಥಳದಿಂದ ಅವನ ಸುತ್ತಲೂ ಪೂರ್ವಾದಿ ದಿಕ್ಕುಗಳಲ್ಲಿ ಯಾವ-ಯಾವ ಬದಿಯಿಂದ ಬಂದ ಜನರಿಗೆ ಹೇಳಲ್ಪಟ್ಟಂಥಹಜನರು, ಪ್ರಚ್ಛಕನ ಗೃಹದಿಂದ ಆಯಾ ದಿಕ್ಕಿನಲ್ಲಿ ಇದ್ದಾರೆ ಎಂದು ತಿಳಿಯಬೇಕು.

ಚಕ್ರಂ ವಿಲಿಖ್ಯ ಚರಣೌ ಪ್ರಕ್ಷಾಳ್ಯ ತನುಶೋಧನಮ್ ।
ಆತ್ಮಪೂಜಾಂ ಗಣೇಶಾರ್ಚಾಮಪಿ ಕೃತ್ವಾ ಮಹೇಶ್ವರಮ್ ॥೩೦॥

ಚಕ್ರಮಧ್ಯಸ್ಥಿತೇ ಪದ್ಮೇ ಪೀಠಪೂಜಾಪುರಸ್ಸರಮ್ ।
ಪರಿವಾರನಿವೇದ್ಯಾಢ್ಯಂ ಪಂಚಾಕ್ಷರ್ಯಾ ಸಮರ್ಚಯೇತ್ ॥೩೧॥

ಚಕ್ರವನ್ನು ಬರೆದು ಮುಗಿಸಿದ ನಂತರ ದೈವಜ್ಞನು ಕೈ-ಕಾಲುಗಳನ್ನು ತೊಳೆದು ಮೈಯನ್ನು ಶುದ್ಧಮಾಡಿಕೊಂಡು, ಆತ್ಮಪೂಜೆಯನ್ನು, ಗಣಪತಿಯ ಅರ್ಚನೆಯನ್ನು ವಿಧಿಪೂರ್ವಕ ಮಾಡಿ, ಚಕ್ರದ ಮಧ್ಯದಲ್ಲಿರುವ ಚತುರ್ದಳ ಪದ್ಮದಲ್ಲಿ ದಕ್ಷಿಣಾ ಮೂರ್ತಿಯನ್ನು ಆವಾಹಿಸಿ ಕ್ರಮ ಪ್ರಕಾರವಾಗಿ ಪರಿವಾರ ಸಮೇತನಾಗಿ ಪಂಚಾಕ್ಷರೀ ಮಂತ್ರದಿಂದ ಅರ್ಚನೆಮಾಡಿ, ಮಂಗಳಾರತಿ ಇತ್ಯಾದಿಗಳಿಂದ ವಿಧಿವತ್ತಾಗಿ ಪೂಜಿಸಬೇಕು.

ಧ್ಯಾನಶ್ಲೋಕ

ಕೈಲಾಸಾದ್ರೇಶಕೋಣೇ ಸುರವಿಟಪಿತಟೇ ಸ್ಫಾಟಿಕೇ ಮಂಡಪೇ
ಸನ್ಮಾತಂಗಾರಾತಿಪೀಠೋಪರಿ ಪರಿಲಸಿತಂ ಸೇವ್ಯಮಾನಂ ಸುರೌಘೈಃ।
ಜಾನುಸ್ಥಂ ವಾಮಬಾಹುಂ ಮೃಗಮಪಿ ಪರಶುಂ ಜ್ಞಾನಮುದ್ರಾಂ
ವಹಂತಂ ನಾಗೋದ್ಯದ್ಯೋಗವೇಷ್ಟಂ ದದತಮೃಷಿಗಣೇ ಜ್ಞಾನ-
ಮೀಶಾನಮೀಡೇ ॥೩೨॥

ಕೈಲಾಸಪರ್ವತದ ಒಂದು ಭಾಗದಲ್ಲಿ ದೇವದಾರು ಮರ ಉಳ್ಳ ಪ್ರಶಾಂತ ಸ್ಥಳದ ನಡುವೆ ದಿವ್ಯ ಮಂಟಪದಲ್ಲಿ ಸ್ಫಟಿಕ ಮಣಿಯಿಂದ ರಚಿತ ಸಿಂಹಾಸನದ ಮೇಲೆ ಶೋಭಿಸುತ್ತಿರುವ, ದೇವತೆಗಳ ಪರಿವಾರ ಉಳ್ಳವನು, ಎಡದ ಕೈಯನ್ನು ಮೊಣಗಂಟಿನ ಮೇಲೆ ಇಡಲ್ಪಟ್ಟ ಜಿಂಕೆ, ಪರಷು ಮತ್ತು ಜ್ಞಾನಮುದ್ರೆಯನ್ನು ಹೊಂದಿರುವ, ನಾಗನನ್ನು ಧರಿಸಿದ ಋಷಿ ಗುಂಪಿಗೆ ಜ್ಞಾನಪ್ರದಾಯಕನು ಆದ ದಕ್ಷಿಣಾಮೂರ್ತಿಯನ್ನು ಆರಾಧಿಸುತ್ತೇನೆ.

ರಾಶಿಪೂಜೆ ಮತ್ತು ಗ್ರಹಪೂಜೆ.

ಮೇಷಾದ್ಯಾ ರಾಶಯಃ ಸ್ವಸ್ವಸ್ಥಾನೇ ಸ್ವಾಶ್ರಿತಭೇ ಗ್ರಹಾಃ ।
ಪರಿವಾರತಯಾ ಪೂಜ್ಯಾ ಗುಳಿಕಶ್ಚ ಸ್ವನಾಮಭಿಃ ॥೩೩॥

**ಬ್ರಹ್ಮಾರ್ಪಣಾಂತೇ ವಾಗ್ದೇವೀಂ ಗುರೂಂಶ್ಚಾಪ್ಯಷ್ಟಮಂಗಲೇ ।
ಪುಷ್ಪೈರಾರಾಧ್ಯ ವಂದೇತ ಪ್ರದೀಪೇ ಚ ತಥಾ ಶ್ರಿಯಮ್ ॥೩೪॥**

ಮೇಷಾದಿ ದ್ವಾದಶರಾಶಿಗಳನ್ನು ಆಯಾಯಾ ಸ್ಥಾನದಲ್ಲಿ ಆವಾಹಿಸಿ ಪೂಜಿಸಬೇಕು. ಅನಂತರ ರಾಶಿಸ್ಥಿತ ತಾತ್ಕಾಲಿಕ ಗ್ರಹರನ್ನು ಆವಾಹನಾದಿ ಪರಿವಾರ ರೂಪದಿಂದ ಪೂಜಿಸಬೇಕು. ನವಗ್ರಹರನ್ನು ಮತ್ತು ಗುಳಿಕನನ್ನು ನಾಮ ಮಂತ್ರಗಳಿಂದ ಪೂಜಿಸಬೇಕು.

ನೈವೇದ್ಯ, ಮಂಗಳಾರತಿ ಮತ್ತು ಬ್ರಹ್ಮಾರ್ಪಣೆ ಮಾಡಬೇಕು. ಅಷ್ಟ ಮಂಗಲ ಪ್ರಶ್ನೆಯನ್ನು ಇಡಲು ಸರಸ್ವತಿ ಮತ್ತು ತನ್ನ ಗುರುವನ್ನು ಪೂಜಿಸಬೇಕು. ಅನಂತರ ಅಲ್ಲಿರುವ ದೀಪದಲ್ಲಿ ಲಕ್ಷ್ಮಿಯನ್ನು ಆವಾಹನ ಮಾಡಿ ಪುಷ್ಪಾದಿ ಉಪಚಾರಗಳಿಂದ ಆರಾಧಿಸಬೇಕು.

## ಸುವರ್ಣಪೂಜೆ

**ಅಥ ಪ್ರಕ್ಷಾಳ್ಯ ತೋಯೇನ ಸ್ವರ್ಣಂ ಚಂದನಭೂಷಿತಮ್ । ಪತ್ರೇ ವಿನ್ಯಸ್ಯ ಕುಸುಮೈರಕ್ಷತೈರಪಿ ಯೋಜಯೇತ್ ॥೩೫॥ ವಾಮಹಸ್ತೇ ನಿಧಾಯಾಥ ವಿಧಾಯಾನ್ಯೇನ ಪಾಣಿನಾ । ಪಂಚಾಕ್ಷರೀಂ ಸಾಷ್ಟ–ಶತಂ ಮನೂನನ್ಯಾಂಶ್ಚ ಭಕ್ತಿತಃ ॥೩೬॥ ಜಪ್ತ್ವಾಥೈಕತ್ರ ವಿನ್ಯಸ್ಯ ಪ್ರಾರಭೇತಾಷ್ಟಮಂಗಲಮ್ । ಸಂಕ್ಷೇಪೇಣಾಥ ತತ್ಕರ್ಮ ಕಥ್ಯತೇ ಗುರುಣೋದಿತಮ್ ॥೩೭॥**

ಯಾವುದಾದರೂ ಒಂದು ಬಂಗಾರದ ನಾಣ್ಯವನ್ನು ನೀರಿನಿಂದ ತೊಳೆದು ಗಂಧ, ಪುಷ್ಪ, ಅಕ್ಷತಾದಿಗಳಿಂದ ಪೂಜಿಸಬೇಕು. ಅನಂತರ ಆ ನಾಣ್ಯವನ್ನು ಗಂಧಾಕ್ಷತೆ ಇತ್ಯಾದಿಗಳಿಂದ ಎಡದ ಅಂಗೈಯಲ್ಲಿ ಇಟ್ಟು ಬಲ ಅಂಗೈಯಿಂದ ಅದನ್ನು ಮುಚ್ಚಿಕೊಂಡು ನೂರೆಂಟು ಪಂಚಾಕ್ಷರೀ ಮಂತ್ರಗಳನ್ನು ಮತ್ತು ತನಗೆ ಉಪದೇಶ ಇರುವ ಮಂತ್ರಗಳನ್ನು ಕೂಡಾ ಭಕ್ತಿಯಿಂದ ಜಪಿಸಬೇಕು. ಈ ಪ್ರಕಾರ ಕೈಯಲ್ಲಿರುವ ಸುವರ್ಣವನ್ನು ಜಪಿಸಿದ ನಂತರ ಪ್ರಶ್ನಕುಂಡಲಿಯ ಉತ್ತರ ದಿಕ್ಕಿನಲ್ಲಿ ಇಟ್ಟು ಅನಂತರ ಅಷ್ಟಮಂಗಲ ಪ್ರಶ್ನೆಯನ್ನು ಪ್ರಾರಂಭಿಸಬೇಕು. ತನ್ನ ಗುರುವಿನಿಂದ ಹೇಳಲ್ಪಟ್ಟ ಅಷ್ಟಮಂಗಲ ಪ್ರಶ್ನೆಯ ಕ್ರಮವನ್ನು ಇಲ್ಲಿ ಹೇಳುತ್ತಾನೆ.

ಕೃತ್ವಾ ದಕ್ಷಿಣತೋ ರಾಶಿಚಕ್ರಂ ಪ್ರಾಂಙ್ಮುಖ ಆಸನೇ ।
ಆಸೀನಃ ಫಲಕೇಭಿನ್ನೇ ವರಾಟೀಸಾಷ್ಟಕಂ ಶತಮ್ ॥೩೮॥

ದೈವಜ್ಞನು ಚಕ್ರದ ದಕ್ಷಿಣ ದಿಕ್ಕಿನಲ್ಲಿ ಪೂರ್ವಕ್ಕೆ ಮುಖಮಾಡಿ, ಸ್ವಚ್ಛವಾದ ಸ್ಥಳದಲ್ಲಿ ಕುಳಿತು ಕೊಂಡು ತನ್ನ ಉತ್ತರ ದಿಕ್ಕಿಗೆ ಉತ್ತಮ ಮರದಿಂದ ಮಾಡಿದ ಒಡಕು ಇಲ್ಲದ ಮಣೆಯನ್ನು ಇಟ್ಟು ಅದರ ಮೇಲೆ 108 ಕವಡೆಗಳನ್ನು ಇಡಬೇಕು.

ನಿಧಾಯ ಮಂತ್ರವತ್ಪ್ರೋಕ್ಷ್ಯ ಗಂಧಪುಷ್ಪಾಕ್ಷತೈಶ್ಚ ತಾಃ ।
ಅಲಂಕೃತ್ಯಾರ್ಚಯೇತ್ತಾಸು ಶಿವಮಾವಾಹ್ಯ ಚಕ್ರವತ್ ॥೩೯॥

ಆ ಮಣೆಯ ಮೇಲಿಟ್ಟ 108 ಕವಡೆಗಳನ್ನು ಮಂತ್ರದಿಂದ ಪ್ರೋಕ್ಷಿಸಿ, ಗಂಧ ಪುಷ್ಪಾಕ್ಷತೆಗಳಿಂದ ಅದನ್ನು ಅಲಂಕರಿಸಿ ಆ ಕವಡೆಗಳ ಮೇಲೆ ದಕ್ಷಿಣಾಮೂರ್ತಿಯನ್ನು ಆವಾಹಿಸಿ ಚಕ್ರದಲ್ಲಿ ಪೂಜೆ ಮಾಡಿದಂತೆ ಇಲ್ಲಿಯೂ ಪೂಜೆ ಮಾಡಬೇಕು.

ಪ್ರಾಗಾದ್ಯಾಶಾಸು ಸೂರ್ಯಾರಾರ್ಯಜ್ಞಾಚ್ಛಾರ್ಕಿವಿಧೂರಗಾನ್ ।
ಅಪಿ ಸಂಪೂಜ್ಯ ತಾಃ ಸ್ಪೃಷ್ಟ್ವಾ ಸ್ಪೃಷ್ಟ್ವಾ ಸಾಷ್ಟಶತಂ ಜಪೇತ್ ॥

ಆ ಮಣೆಯ ಮೇಲಿಟ್ಟ 108 ಕವಡೆಗಳ ರಾಶಿಯ ಪೂರ್ವವೇ ಮೊದಲಾದ 8 ದಿಕ್ಕುಗಳಲ್ಲಿ ಕ್ರಮವಾಗಿ ನವಗ್ರಹರಾದ ಸೂರ್ಯ, ಕುಜ, ಗುರು, ಬುಧ, ಶುಕ್ರ, ಶನಿ, ಚಂದ್ರ ಮತ್ತು ರಾಹು ಇವರನ್ನು ಮೊದಲಿನಂತೆ ಆವಾಹಿಸಿ ಪರಿವಾರ ಕ್ರಮದಿಂದ ಪೂಜಿಸಿ ಆ ಕವಡೆಯ ರಾಶಿಯನ್ನು ಕೈಯಿಂದ ತಿರುಗಿಸುತ್ತಾ 108 ಸಲ ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

ಪಂಚಾಕ್ಷರೀಂ ಮನೂನನ್ಯಾನಪಿ ಗುರ್ವಾನನಾಚ್ಛ್ರುತಾನ್ ।
ತತಃ ಸಂಪ್ರಾರ್ಥಯೇದೇವಂ ಗುರೂನಪಿ ನಿಜಾನ್ ಗ್ರಹಾನ್ ॥

ದೈವಜ್ಞನು ಕವಡೆಗಳನ್ನು ತಿರುಗಿಸುತ್ತಾ 108 ಸಲ ಪಂಚಾಕ್ಷರೀ ಮಂತ್ರಗಳನ್ನು ಜಪಿಸಿ ಅನಂತರ ಗುರು ಮುಖದಿಂದ ಉಪದೇಶ ಪಡೆದ ಮಂತ್ರಗಳನ್ನು ಜಪಿಸಿ ಆ ಮೇಲೆ ಸೂರ್ಯಾದಿ ಗ್ರಹರನ್ನು ಶಿವನನ್ನು ಮತ್ತು ತನ್ನ ಗುರುವನ್ನು ಪ್ರಾರ್ಥಿಸಬೇಕು.

ಏತನ್ನಕ್ಷತ್ರಸಂಜಾತಸ್ಯೈತನ್ನಾಮ್ನೋಽಸ್ಯ ಪೃಚ್ಛತಃ । ಭೂತೇ ಚ ವರ್ತ-
ಮಾನೇ ಚ ಸಮಯೇ ಚ ಭವಿಷ್ಯತಿ ॥೪೨॥ ಶುಭಾಶುಭಾನಿ ಚೇದಾ-
ನೀಂ ಚಿಂತಿತಸ್ಯ ವಿಶೇಷತಃ । ಸಂಭವಾಸಂಭವಾದ್ಯನ್ಯಾನ್ಯರ್ಥಪುತ್ರ-
ಗೃಹಾದಿಷು ॥೪೩॥ ಶುಭಾಶುಭಾನಿ ಯಾನ್ಯೇತಾನ್ಯಖಿಲಾನ್ಯಪಿ ತತ್ವತಃ ।
ಯುಷ್ಮತ್ಪ್ರಸಾದತಃ ಸ್ಪಷ್ಟಂ ಮಮ ಚಿತ್ತೇ ಸ್ಫುರಂತ್ವಿತಿ ॥೪೪॥

ಸಂಕಲ್ಪಃ-ದೈವಜ್ಞನು ಪ್ರಾರ್ಥನೆಯ ನಂತರ ಪೃಚ್ಛಕನ ಜನ್ಮ ನಕ್ಷತ್ರ ಮತ್ತು ಹೆಸರನ್ನು ತಿಳಿದು, ಈ ನಕ್ಷತ್ರ ಮತ್ತು ಹೆಸರಿನ ಪೃಚ್ಛಕನಿಗೆ ಭೂತಕಾಲದಲ್ಲಿ ಸಂಭವಿಸಿದ, ವರ್ತಮಾನಕಾಲದಲ್ಲಿ ನಡೆಯುತ್ತಿರುವ ಮತ್ತು ಭವಿಷ್ಯತ್‌ಕಾಲದಲ್ಲಿ ಸಂಭವಿಸಬಹುದಾದ ಶುಭಾಶುಭಫಲಗಳನ್ನು ಧನ, ಸಂತಾನ, ಗೃಹ ಮತ್ತು ಸಾಂಸಾರಿಕ ವಿಚಾರ ಮೊದಲಾದವುಗಳಿಗೆ ಸಂಬಂಧಪಟ್ಟ ಫಲಾಫಲಗಳನ್ನು ಹೇಳಲು ನಿಮ್ಮ ಅನುಗ್ರಹ(ದಕ್ಷಿಣಾಮೂರ್ತಿ, ನವಗ್ರಹರು ಮತ್ತು ಗುರುವಿನ) ದಿಂದ ವಿವರವಾಗಿ ನನ್ನ ಚಿತ್ತದಲ್ಲಿ ಸ್ಫುರಿಸಲಿ ಎಂದು ಪ್ರಾರ್ಥಿಸಬೇಕು.

ತತಃ ಕನ್ಯಾಕುಮಾರೋ ವಾ ಸ್ನಾತ್ವಾ ವಸ್ತ್ರಾದ್ಯಲಂಕೃತಃ ।
ರಾಶಿಗ್ರಹಸ್ಥಿತಿಜ್ಞಾನಶೂನ್ಯೋ ವಾ ಕಲ್ಪನಾಪರಃ ॥೪೫॥

ಅನಂತರ ಒಬ್ಬಳು ಹುಡುಗಿ ಅಥವಾ ಒಬ್ಬ ಹುಡುಗನು ಅವರಿಬ್ಬರೂ ಅಲ್ಲಿ ಇಲ್ಲದಿದ್ದರೆ, ರಾಶಿ ಗ್ರಹಾದಿ ಸ್ಥಿತಿಯನ್ನು ಅರಿಯದಂಥ ಬೇರೊಬ್ಬ ವ್ಯಕ್ತಿಯನ್ನು, ಸ್ನಾನಮಾಡಿಸಿ ವಸ್ತ್ರಾದಿಗಳಿಂದ ಅಲಂಕರಿಸಿ ಅಲ್ಲಿಗೆ ತರಿಸಬೇಕು.

ಉಪೇತ್ಯಾರಾಧಯೇತ್ ಪುಷ್ಪೈರ್ದೀಪವಿಘ್ನಖಗೇಶ್ವರಾನ್ ।
ತತೋಽಸ್ಯ ದಕ್ಷಿಣೇ ಹಸ್ತೇ ಸ್ವರ್ಣಂ ಸಾಕ್ಷತಪುಷ್ಪಕಮ್ ॥೪೬॥
ದದ್ಯಾದೇತದ್ವಹನ್ ಸೋಽಪಿ ಕೃತ್ವಾ ಚಕ್ರಪ್ರದಕ್ಷಿಣಮ್ ।
ಪಶ್ಚಾತ್ತನ್ನಿಹಿತಸ್ತಿಷ್ಠೇಚ್ಚಕ್ರಸ್ಯ ಪ್ರಾಙ್ಮುಖಃ ಸುಧೀಃ ॥

ಅನಂತರ ಅಲ್ಲಿಗೆ ಕರೆತಂದ ಆ ಅಲಂಕೃತ ವ್ಯಕ್ತಿಯ ಕೈಯಲ್ಲಿ ಪುಷ್ಪಾಕ್ಷತೆಗಳನ್ನು ಕೊಟ್ಟು ಅವನ್ನು ಶಿವನಿಗೆ, ಗ್ರಹರಿಗೆ ಮತ್ತು ದೀಪಕ್ಕೆ ಅವನಿಂದ ಅರ್ಪಿಸಿ ಕೈಮುಗಿದು ಪ್ರಾರ್ಥಿಸುವಂತೆ ಹೇಳಬೇಕು. ಅನಂತರ ಅಲ್ಲಿರುವ ಸುವರ್ಣ ಮತ್ತು ಅದರೊಡನೆ ಇರುವ ಪುಷ್ಪಾಕ್ಷತೆಗಳನ್ನು ಪೃಚ್ಛಕನು ತನ್ನ

ಮುಷ್ಟಿಯಿಂದ ತೆಗೆದು ಆ ಅಲಂಕೃತ ವ್ಯಕ್ತಿಯ ಅಂಜಲಿಯಲ್ಲಿ ಇಡಬೇಕು. ಅನಂತರ ಆ ವ್ಯಕ್ತಿಯು ಅದನ್ನು ಅಂಜಲಿಯಲ್ಲಿ ಹಿಡಿದುಕೊಂಡು ಆ ಚಕ್ರಕ್ಕೆ ಮೂರು ಪ್ರದಕ್ಷಿಣೆ ಮಾಡಿ, ಎಡಬದಿಯಲ್ಲಿ ಚಕ್ರಕ್ಕೆ ಅಭಿಮುಖವಾಗಿ ನಿಂತು ಕೊಳ್ಳಬೇಕು.

ತತಃ ಪ್ರಷ್ಟಾನಿಜಾಭೀಷ್ಟಂ ಧ್ಯಾಯಂಸ್ತಿಷ್ಠತು ಸಾಂಜಲಿಃ ।
ದೈವಜ್ಞೋಽಥಸ್ಮರನ್ ಪ್ರಷ್ಟುರಭೀಷ್ಟಂ ತಾಃ ವರಾಟಿಕಾಃ ॥೪೬॥

ಆ ಅಲಂಕೃತ ವ್ಯಕ್ತಿಯು ಪ್ರದಕ್ಷಿಣೆ ಮಾಡಿ ಅಲ್ಲಿ ನಿಂತನಂತರ ಪ್ರಚ್ಛಕನು ಕೈಮುಗಿದುಕೊಂಡು ತನ್ನ ಅಭೀಷ್ಟವನ್ನು ಮನಸ್ಸಿನಲ್ಲಿ ನೆನೆಸುತ್ತಾ ಅಲ್ಲಿ ಪ್ರತ್ಯಕ್ಷವಾಗಿ ಉಪಸ್ಥಿತನಾಗಬೇಕು ದೈವಜ್ಞನು ಪ್ರಚ್ಛಕನ ಅಭೀಷ್ಟ ಫಲಿಸಲು ತನ್ನ ಮನಸ್ಸಿನಲ್ಲಿ ಸಂಕಲ್ಪಿಸಿ ದೇವರನ್ನು ಪ್ರಾರ್ಥಿಸುತ್ತಾ ಆ ಕವಡೆಗಳನ್ನು ತನ್ನ ಕೈಯಿಂದ ಸವರುತ್ತಾ ಇರಬೇಕು.

ಸಂಸ್ಪೃಶನ್ ಸಂಸ್ಪೃನ್ ಮಂತ್ರಂ ಮೂರ್ತಿತ್ವೇಪೂರ್ವಕಂ ಜಪೇತ್ ।
ತ್ರಿವಾರಂ ತಜ್ಜಪಸ್ಯಾಂತೇ ದೂತಂ ಬ್ರೂಯಾನ್ನ್ಯಸೇರಿತಿ ॥೪೯॥

ದೈವಜ್ಞನು ತನ್ನ ಕೈಯಿಂದ ಕವಡೆಗಳನ್ನು ಸವರುತ್ತಾ "ಮೂರ್ತಿತ್ವೇ ಪರಿಕಲ್ಪಿತ" ಎಂಬ ವರಾಹಮಿಹಿರ ಕೃತ ಬೃಹಜ್ಜಾತಕ ಗ್ರಂಥದ ಮೊದಲನೇ ಪ್ರಾರ್ಥನಾ ಶ್ಲೋಕವನ್ನು ಮೂರು ಸಲ ಜಪಿಸಿ ಅನಂತರ ಸುವರ್ಣ ಅಂಜಲಿಯಲ್ಲಿ ಹಿಡಿದಿರುವ ವ್ಯಕ್ತಿಗೆ, "ಇಡು" ಎಂದು ಹೇಳತಕ್ಕದ್ದು.

ತದೈವ ವಿನ್ಯಸೇದ್ ದೂತಃ ಸ್ವರ್ಣಂ ನಿಜಕರಸ್ಥಿತಮ್ ।
ಚಕ್ರಸ್ಥಭೇಷು ಚೈಕತ್ರ ದೈವಜ್ಞಸ್ತಾ ವರಾಟಿಕಾಃ ॥೫೦॥

ದೈವಜ್ಞನು ಇಡು ಎಂದು ಹೇಳಿದ್ದನ್ನು ಕೇಳಿದ ಕೂಡಲೇ ಅಂಜಲಿಯಲ್ಲಿ ಸುವರ್ಣಹಿಡಿದಿರುವ ವ್ಯಕ್ತಿಯು, ರಾಶಿಚಕ್ರದ ಹದಿನೆರಡು ರಾಶಿಗಳಲ್ಲಿ ತನಗೆ ಮನಸ್ಸಿಗೆ ತೋರಿದ ಯಾವುದಾದರೂ ಒಂದು ರಾಶಿಯಲ್ಲಿ ಆ ಸುವರ್ಣವನ್ನು ಇಡಬೇಕು. ಅನಂತರ ದೈವಜ್ಞನು ಆ ಕವಡೆಗಳ ಮೇಲೆ ತನ್ನ ಕೈಯನ್ನು ಇಡಬೇಕು.



## ದೈವಜ್ಞರ ಸಿದ್ಧಮಂತ್ರ

ಮೂರ್ತಿತ್ವೇ ಪರಿಕಲ್ಪಿತಃ ಶಶಭೃತೋ ವರ್ತ್ಮಾಽಪುನರ್ಜನ್ಮನಾ-
ಮಾತ್ಮೇತ್ಯಾತ್ಮವಿದಾಂ ಕ್ರತುಶ್ಚ ಯಜತಾಂ ಭರ್ತಾಽಮರಜ್ಯೋತಿ-
ಷಾಮ್ । ಲೋಕಾನಾಂ ಪ್ರಲಯೋದ್ಭವಸ್ಥಿತಿವಿಭುಶ್ಚಾನೇಕಧಾ
ಯಃ ಶ್ರುತೌ। ವಾಚಂ ನಃ ಸ ದದಾತು ನೈಕಕಿರಣಸ್ತ್ರೈಲೋಕ್ಯ-
ದೀಪೋ ರವಿಃ ॥ವರಾಹ ಹೋರಾ॥

| | | |
|---|---|---|
| 1. ಮೂರ್ತಿತ್ವೇ | 10. ಚ | 19. ಶ್ರುತೌ |
| 2. ಪರಿಕಲ್ಪಿತಃ | 11. ಯಜತಾಂ | 20. ವಾಚಂ |
| 3. ಶಶಭೃತಃ | 12. ಭರ್ತಾ | 21. ನಃ |
| 4. ವರ್ತ್ಮಾ | 13. ಅಮರ ಜ್ಯೋತಿಷಾಂ | 22. ಸಃ |
| 5. ಅಪುನರ್ಜನ್ಮನಾಮ್ | 14. ಲೋಕಾನಾಂ | 23. ದದಾತು |
| 6. ಆತ್ಮಾ | 15. ಪ್ರಲಯೋದ್ಭವಸ್ಥಿತಿವಿಭುಃ | 24. ನ |
| 7. ಇತಿ | 16. ಚ | 25. ಏಕಕಿರಣಃ |
| 8. ಆತ್ಮವಿದಾಂ | 17. ಅನೇಕಧಾ | 26. ತ್ರೈಲೋಕ್ಯದೀಪಃ |
| 9. ಕ್ರತುಃ | 18. ಯಃ | 27. ರವಿಃ |

ವಿಭಜೇತ್ರಿರುದಕ್ಪೂರ್ವಂ ನಿಮಿತ್ತಾನಿ ಚ ಚಿಂತಯೇತ್ ।
ಪ್ರಾಕ್ಪೃಚ್ಛಾಸಮಯೋ ಯದ್ಯಚ್ಛುಭಾಶುಭ ಮುದೀರಿತಮ್ ॥

ಅದೇ ಕಾಲದಲ್ಲಿ ದೈವಜ್ಞನು ಆ 108 ಕವಡೆಗಳನ್ನು ಮೂರು ಪಾಲು ಮಾಡಿ ಎಡಬದಿ, ಮುಂದೆ ಮತ್ತು ಬಲಬದಿಯಲ್ಲಿ ಇರಿಸಬೇಕು. ಅಲ್ಲದೇ ಆ ಕಾಲದಲ್ಲಿ ಸಂಭವಿಸುವ ಶಕುನಗಳನ್ನು ಕೂಡಾ ಮೊದಲು ಹೇಳಿದಂತೆ ಗ್ರಹಿಸಿ ಕೊಳ್ಳಬೇಕು.

ತತ್ತತ್ಸಕಲಮತ್ರಾಪಿ ಚಿಂತ್ಯಂ ಸ್ಪರ್ಶಶರಾದಿಕಮ್ ।
ಅಥ ದೂತಃ ಪದಚ್ಛಾಯಾಮಾನಂ ಕುರ್ಯಾತ್ಸಮಕ್ಷಿತೌ ॥

ಮೊದಲು ಹೇಳಿದಂತೆ ಆ ಕಾಲದ ಸ್ಪರ್ಶನ ಮತ್ತು ವಾಯು ಲಕ್ಷಣವನ್ನು ತಿಳಿಯಬೇಕು. ಅನಂತರ ಅಲ್ಲಿರುವ ಮಧ್ಯಸ್ಥನು ಸಮತಟ್ಟಾದ ನೆಲದಲ್ಲಿ ಆ ಕಾಲದ ನೆರಳಿನ ಉದ್ದ ಅಳತೆ ಮಾಡಬೇಕು.

ಆರೂಢ ಶೋಧನೆ:–

ಯಸ್ಮಿನ್ ರಾಶೌ ಸ್ಥಿತಂ ಸ್ವರ್ಣಂ ಸ ಸ್ಯಾದಾರೂಢಸಂಜ್ಞಕಃ ।
ಜ್ಞಾತ್ವಾ ದೈವವಿದಾರೂಢಂ ಸ್ವರ್ಣಸ್ಯೋತ್ತಾನತಾದಿ ಚ ॥೫೩॥

ಯಾವ ರಾಶಿಯಲ್ಲಿ ಸುವರ್ಣ ಇಡಲ್ಪಟ್ಟಿದೆಯೋ ಆ ರಾಶಿಯೇ ಆರೂಢರಾಶಿ ಆಗಿರುತ್ತದೆ. ರಾಶಿಯಲ್ಲಿ ಇಟ್ಟ ಸುವರ್ಣವು ಕೆಳಮುಖವಾಗಿ ಉಂಟೋ ಮೇಲ್ಮುಖವಾಗಿ ಉಂಟೋ ಅಥವಾ ಯಾವ ಬದಿಯಲ್ಲಿ ಇದೆ ಎಂದು ತಿಳಿಯಬೇಕು. ಅಲ್ಲದೇ ಸುವರ್ಣವು ಪುಷ್ಪಾಕ್ಷತೆಗಳ ಅಡಿಯಲ್ಲಿ ಉಂಟೋ ಮಧ್ಯದಲ್ಲಿ ಉಂಟೋ ಅಥವಾ ಮೇಲ್ಗಡೆ ಇದೆಯೋ ಎಂದು ತಿಳಿಯಬೇಕು.

ಪೃಚ್ಛಕಾಯ ಫಲಂ ಕಿಂಚಿತ್ತ್ಕೋಚ್ಯ ಪೂಜಾಂ ಸಮಾಪ್ಯ ಚ ।
ವರಾಟೀರಷ್ಟಶಸ್ತ್ಯಕ್ತ್ವಾ ಸ್ಥಾನತ್ರಿತಯಃ ಪೃಥಕ್ ॥೫೪॥ ಶಿಷ್ಟ-
ಸಂಖ್ಯಾಮಪಿ ಜ್ಞಾತ್ವಾ ರಕ್ಷಣೀಯಾ ವರಾಟಿಕಾಃ ॥೫೫॥

ಅಷ್ಟಮಂಗಲ ಸಂಖ್ಯೆ:-ದೈವಜ್ಞನು ತನ್ನ ಪೂಜೆಯನ್ನು ಮುಗಿಸಿ ಪ್ರಚ್ಛಕನಿಗೆ ಆರೂಢ ಲಗ್ನದಿಂದ ದೈವಾನುಕೂಲ ವಿಚಾರ ಇತ್ಯಾದಿ ಕೆಲವು ಫಲಗಳನ್ನು ಹೇಳಬೇಕು. ಅನಂತರ ಆ ಮೂರು ಸ್ಥಾನಗಳಲ್ಲಿರುವ ಕವಡೆಗಳ ಸಾಲುಗಳನ್ನು 8ರಿಂದ ಭಾಗಿಸಿ ಎಡದಿಕ್ಕಿನ ಶಿಷ್ಟವನ್ನು ಶತಸಂಖ್ಯಾ ಸ್ಥಾನದಲ್ಲಿ ಮಧ್ಯಭಾಗದ

ಶಿಷ್ಟವನ್ನು ದಶಸಂಖ್ಯಾಸ್ಥಾನದಲ್ಲಿ ಮತ್ತು ಬಲದಿಕ್ಕಿನ ಭಾಗದ ಶಿಷ್ಟವನ್ನು ಏಕ ಸಂಖ್ಯಾಸ್ಥಾನದಲ್ಲಿ ಇಟ್ಟು ಆ ಸಂಖ್ಯೆಯನ್ನು ಬರೆದು ಕೊಳ್ಳಬೇಕು. ಇದು ಅಷ್ಟಮಂಗಲ ಸಂಖ್ಯೆ ಆಗಿರುತ್ತದೆ.

**ಆರೂಢಂ ಸ್ವರ್ಣಸಂಸ್ಥಾನಂ ಛಾಯಾಮುಷ್ಯಷ್ಟಮಙ್ಗಲಮ್ ।**
**ವಿಲಿಖೇನ್ನಾಮಧೇಯಾತಾಂಹಃ ಪ್ರಷ್ಟೃತಾರಾಪುರಸ್ಸರಮ್ ॥೫೬॥**

**ಯದತ್ರ ಕಥಿತಂ ಕರ್ಮ ಚಕ್ರಲೇಖನಪೂರ್ವಕಮ್ । ಸಂಕ್ಷೇ-**
**ಪೇಣ ತದೇವಾಥ ಪುನರಪ್ಯುಚ್ಯತೇ ಕ್ರಮಾತ್ ॥೫೭॥**

ಆರೂಢಲಗ್ನ, ರಾಶಿಚಕ್ರದಲ್ಲಿಟ್ಟ ಸುವರ್ಣನಾಣ್ಯದ ಸ್ಥಿತಿ, ಆ ಕಾಲದ ನೆರಳಿನ ಅಳತೆ ಅಂಗುಲಗಳಲ್ಲಿ, ಶೋಧಿತ ಅಷ್ಟಮಂಗಲ ಸಂಖ್ಯೆ, ಇವುಗಳನ್ನು ಬರದುಕೊಂಡು, ಅದರ ಮೇಲ್ಗಡೆ ಪ್ರಚ್ಛಕನ ನಕ್ಷತ್ರ, ಹೆಸರು ಇವುಗಳನ್ನು ಕೂಡಾ ಬರೆದುಕೊಳ್ಳಬೇಕು. ಈ ವರೇಗೆ ಹೇಳಲ್ಪಟ್ಟ ಅಷ್ಟಮಂಗಲ ಪ್ರಶ್ನೆಯಲ್ಲಿ ಅನುಸರಿಸಬೇಕಾದ ವಿಧಾನಗಳನ್ನು ಇನ್ನು ಮುಂದೆ ಸಂಕ್ಷೇಪವಾಗಿ ಪುನಃ ಹೇಳುತ್ತಾನೆ.

## ಸಂಕ್ಷಿಪ್ತ ಅಷ್ಟಮಂಗಲ ವಿಧಾನ

**ವಿಲಿಖ್ಯ ಚಕ್ರಂ ಪ್ರವಿಕೀರ್ಯ ಚಾಕ್ಷತಂ ಸಂಪೂಜ್ಯ ಭಕ್ತ್ಯಾಥ ಕೃತೇಷ್ಟಮಂಗಲೇ । ಆರಾಧ್ಯ ರಾಶೀಂ ಕನಕೇನ ಸಂಸ್ಪೃಶೇತ್ ಪ್ರಷ್ಟಾವರಾಟೀರ್ವಿಭಜೇಚ್ಚ ದೈವವಿತ್ ॥೫೮॥**

ಮೊದಲು ಚಕ್ರವನ್ನು ಬರೆದು ಅಕ್ಷತೆಗಳಿಂದ ಅರ್ಚನೆಮಾಡಿ ಭಕ್ತಿಯಿಂದ ದಕ್ಷಿಣಾಮೂರ್ತಿಯನ್ನು, ರಾಶಿ, ಗ್ರಹಗಳನ್ನು ಕ್ರಮವಾಗಿ ಆರಾಧಿಸಿ ಸುವರ್ಣವನ್ನು ಯಾವುದಾದರೂ ಒಂದು ರಾಶಿಯಲ್ಲಿ ಇರಿಸಿ ದೈವಜ್ಞನು ಅಷ್ಟಮಂಗಲ ಕವಡೆಯನ್ನು 3 ಪಾಲುಮಾಡಿ ಅವುಗಳನ್ನು ಪ್ರತ್ಯೇಕವಾಗಿ 8ರಿಂದ ಭಾಗಿಸಿ ಶಿಷ್ಟ ಅಷ್ಟಮಂಗಲ ಸಂಖ್ಯೆಯನ್ನು ಶೋಧಿಸಬೇಕು.

**ರಕ್ತಾನಿ ಕುಸುಮಾನ್ಯತ್ರ ಗೃಹ್ಯಂತೇ ಕೈಶ್ಚನಾಪರೈಃ ।**
**ಶುಕ್ಲಾನಿ ದೃಶ್ಯತೇ ಪ್ರಾಯೋಽಗಾದ್ಯ ತಂಬಾಭಿಧಾರ್ತವಮ್ ॥**

ಅಷ್ಟಮಂಗಲ ಚಕ್ರಪೂಜೆಯಲ್ಲಿ ಕೆಲವರು ಕೆಂಪು ಹೂಗಳನ್ನು ಮತ್ತು ಕೆಲವರು ಬಿಳಿಹೂಗಳನ್ನು ಉಪಯೋಗಿಸಬೇಕೆಂದು ಹೇಳುತ್ತಾರೆ. ಆದರೆ ಈ ಪ್ರಾಂತ್ಯದಲ್ಲಿ ಹೆಚ್ಚಾಗಿ ತುಂಬೆ ಹೂಗಳಿಂದ ಚಕ್ರ ಪೂಜೆ ಮಾಡುತ್ತಾರೆ.

ಇಲ್ಲಿಗೆ ಪ್ರಶ್ನಮಾರ್ಗ ನಾಲ್ಕನೇ ಅಧ್ಯಾಯ ಮುಗಿಯಿತು.

## ತಾತ್ಕಾಲಿಕ ನಿಮಿತ್ತಗಳು

ಪ್ರಶ್ನೆ ಯದುಚ್ಯತೇ ಯಚ್ಚ ಶ್ರೂಯತೇ ಯಚ್ಚ ದೃಶ್ಯತೇ ।
ತತ್ಸಾದೃಶ್ಯೇನ ಸಕಲಂ ಪ್ರಷ್ಟುರ್ವಾಚ್ಯಂ ಶುಭಾಶುಭಮ್॥೧॥

ಪ್ರಶ್ನ ಕಾಲದಲ್ಲಿ ಹೇಳಲ್ಪಡುವ ಮಾತುಗಳು, ಆ ಕಾಲದಲ್ಲಿ ಕೇಳಲ್ಪಡುವ ಮಾತುಗಳು, ಅಥವಾ ನೋಡಲ್ಪಡುವ ದೃಶ್ಯಗಳು, ಇತ್ಯಾದಿ ತಾತ್ಕಾಲಿಕ ನಿಮಿತ್ತಗಳನ್ನು ಆಧರಿಸಿ ಪ್ರಚ್ಛಕನಿಗೆ ಸಂಭವಿಸಬಹುದಾದ ಶುಭಾಶುಭ ಫಲಗಳನ್ನು ಹೇಳಬೇಕು.

ಯಸ್ಯಕಸ್ಯಾಪಿ ಕಾರ್ಯಸ್ಯ ಪೃಚ್ಛಾಯಾಂ ಪ್ರಸ್ಥಿತಾವಪಿ ।
ತತ್ಕಾರ್ಯಸಾಧನಂ ವಸ್ತು ದೃಷ್ಟಂ ಚೇತ್ತತ್ತು ಸಿಧ್ಯತಿ ॥೨॥

ಯಾವುದಾದರೂ ಒಂದು ಕಾರ್ಯವನ್ನು ಸಾಧಿಸಲು ಹೊರಡುವಾಗ ಅಥವಾ ಪ್ರಶ್ನೆಯನ್ನು ಹೇಳಲು ಹೊರಡುವಾಗ ಆ ಕಾರ್ಯಸಾಧನೆಗೆ ಯೋಗ್ಯವಾದ ವಸ್ತುವು ನೋಡಲಿಕ್ಕೆ ಲಭಿಸಿದರೆ, ಆ ಕಾರ್ಯವು ಕೈಗೂಡುತ್ತದೆ.

ವಾಮಾಂಘ್ರಿರಗ್ರೇ ನಿಹಿತಃ ಶುಭಃ ಸ್ಯಾದ್‌ದೂತಸ್ಯ ದೋಷಾಯ
ಚ ದಕ್ಷಿಣಾಂಘ್ರಿಃ । ದೋಷಾಯ ಚಾಂಘ್ರ್ಯೋಶ್ಚಲನಂ ಹಿ ತಸ್ಯ
ಸ್ಥಿತಿಃ ಸ್ಥಿರಾ ತಸ್ಯ ಶುಭಪ್ರದಾ ಸ್ಯಾತ್ ॥೩॥

ಅಂಗಚೇಷ್ಟೆಃ-1. ಪ್ರಚ್ಛಕನು ಎಡಕಾಲನ್ನು ಮುಂದಕ್ಕೆ ಇಟ್ಟುಕೊಂಡು ಪ್ರಶ್ನೆ ಕೇಳಿದರೆ ಶುಭ. 2. ಬಲಕಾಲನ್ನು ಮುಂದಕ್ಕೆ ಚಾಚಿ ಪ್ರಶ್ನೆ ಕೇಳಿದರೆ ಅಶುಭ. 3. ಕಾಲುಗಳನ್ನು ಅಲ್ಲಾಡಿಸಿ ಪ್ರಶ್ನೆ ಕೇಳಿದರೆ ಅಶುಭ. 4. ಗಟ್ಟಿಯಾಗಿ ಕುಳಿತುಕೊಂಡು ಅಂಗಾಂಗಗಳನ್ನು ಅಲ್ಲಾಡಿಸದೆ ಪ್ರಶ್ನೆ ಕೇಳಿದರೆ ಅದು ಶುಭಫಲ ಸೂಚಕ ಆಗಿರುತ್ತದೆ.

**ಸುಖೋಪವಿಷ್ಟ ಋಜ್ವಙ್ಗಸ್ತ್ವಙ್ಗದೇಶೇ ಶುಭಾಸನೇ ।**
**ದೈವಜ್ಞಾಭಿಮುಖಶ್ಚೈವ ಶುಭಂ ಯಾತ್ಯನ್ಯಥಾಽಶುಭಮ್ ॥೪॥**

ಪ್ರಚ್ಛಕನು ದೈವಜ್ಞನ ಸಮ್ಮುಖದಲ್ಲಿ ಎತ್ತರವಾದ ಒಳ್ಳೇ ಆಸನದಲ್ಲಿ, ನೆಟ್ಟಗೆ ಸುಖಾಸೀನನಾಗಿ ಕುಳಿತುಕೊಂಡು ಪ್ರಶ್ನೆಕೇಳಿದರೆ ಶುಭಫಲ ಸಂಭವಿಸುತ್ತದೆ. ವ್ಯತ್ಯಯವಾದ್ದಲ್ಲಿ ಅಂದರೆ ನಿಂತುಕೊಂಡು ಅಥವಾ ಕೆಟ್ಟ ಆಸನದಲ್ಲಿ ಕೂತು ಪ್ರಶ್ನೆ ಕೇಳಿದರೆ ಅಶುಭಫಲ ಸಂಭವಿಸುತ್ತದೆ.

**ಉತ್ತಿಷ್ಠತಿ ಯದಿ ಪ್ರಶ್ನಂ ಕುರ್ವನ್ನಾಸೀತ ಆಸನಾತ್ । ಸ್ಥಿತ-**
**ಶ್ಚೋಪವಿಶೇತ್ ಕುರ್ವನ್ ಭದ್ರಮೇವೋಭಯಂ ಮತಮ್ ॥**

ಪ್ರಚ್ಛಕನು ನಿಂತುಕೊಂಡು ಪ್ರಶ್ನೆಕೇಳಿ ಅನಂತರ ಕೂತುಕೊಂಡರೆ, ಅಥವಾ ಕೂತುಕೊಂಡು ಪ್ರಶ್ನೆಕೇಳಿ ಅನಂತರ ನಿಂತುಕೊಂಡರೆ, ಈ ಎರಡೂ ತರದ ಸ್ಥಿತಿಯು ಶುಭಫಲದಾಯಕ ಎಂದು ತಿಳಿಯಬೇಕು.

**ಪ್ರಷ್ಟಾ ದೃಷ್ಟಿಪಥಂ ಪ್ರಾಪ್ಯ ಸ್ಥಿತ್ವಾ ಸ್ಥಿತ್ವಾಗಮದ್ಯದಿ ।**
**ಆಶೀತ್ಯ ಸ್ಥಿತಿಸಂಖ್ಯಾಹಾನ್ಯಸ್ಯ ಕಾರ್ಯಸ್ಯ ಸಾಧನಮ್ ॥೬॥**

ದೈವಜ್ಞನು ಆಗಮಿಸುವ ಪ್ರಚ್ಛಕನನ್ನು ನೋಡಿದ ನಂತರ ಪ್ರಚ್ಛಕನು ದಾರಿಯಲ್ಲಿ ನಿಂತು-ನಿಂತು ಬರುತ್ತಿದ್ದರೆ, ಅವನು ಎಷ್ಟುಸಲ ದಾರಿಯಲ್ಲಿ ನಿಲ್ಲುತ್ತಾನೋ, ಅಷ್ಟುದಿವಸ ಅವನ ಕಾರ್ಯಸಾಧನೆಗೆ ವಿಳಂಬ ಆಗುತ್ತದೆ ಎಂದು ಹೇಳಬೇಕು.

**ಅಂತರಾ ದೂತಮಾತ್ಮಾನಂ ಯದಿ ಕಶ್ಚನ ಗಚ್ಛತಿ ।**
**ಅನಾಗಮಂ ಸಹಾಯಸ್ಯ ಕಲ್ಪಿತಸ್ಯಾಸ್ಯ ನಿರ್ದಿಶೇತ್ ॥೭॥**

ಪ್ರಶ್ನಕಾಲದಲ್ಲಿ ಪ್ರಚ್ಛಕನ ಮತ್ತು ದೈವಜ್ಞನ ನಡುವಿನಿಂದ ಯಾರಾದರೊಬ್ಬರು ದಾಟಹೋದರೆ ಪ್ರಚ್ಛಕನಿಗೆ ಚಿಂತಿತ ಸಹಾಯ ಲಭಿಸುವುದಿಲ್ಲ ಎಂದು ಹೇಳಬೇಕು.

**ಹಸ್ತೌ ಧೂನ್ವನ್ ವಿಮೃದ್ನಂಶ್ಚತಿರಶ್ಚೀನಮುಖಃ ಸ್ಥಿತಃ ।**
**ವಿಸ್ಮೃತಸ್ವಾರ್ಥ ಇತ್ಯೇತ್ಯೈರ್ಯತ್ಪೃಷ್ಟಂ ತದ್ವಿನಶ್ಯತಿ ॥೮॥**

ಪ್ರಚ್ಛಕನು ಕೈಯನ್ನು ಅಲ್ಲಾಡಿಸಿ ಅಥವಾ ತಿಕ್ಕಿಕೊಂಡು, ಅಥವಾ ಅಡ್ಡ ಮುಖಮಾಡಿ ದೈವಜ್ಞನ ಮುಖ ನೋಡದೆ ತಾನು ಕೇಳಬೇಕಾದ ವಿಷಯ

ಮರೆತು ಹೋಯಿತೆಂದು ಹೇಳಿ ಪ್ರಶ್ನೆ ಕೇಳಿದರೆ, ಅವನು ಯಾವುದನ್ನು ಕೇಳುತ್ತಾನೋ ಅದು ನಾಶವಾಗುತ್ತದೆ ಎಂದು ಹೇಳಬೇಕು.

ಸ್ವಾಂಗೇಷ್ವನ್ಯತ್ರ ವಾ ದ್ರವ್ಯೇ ಗಾಢಸಂತಾಡನಂ ಕ್ಷಣಾತ್ ।
ಮೃತ್ಯುದಂ ಲಯಲಿಂಗಾನಾಂ ಚಿಂತೇಕ್ಷಾಶ್ರವಣಾದಿಕಮ್ ॥

ಪ್ರಚ್ಛಕನು ತನ್ನ ಅಂಗಾಂಗಗಳನ್ನು ಅಥವಾ ಬೇರೆ ಯಾವುದಾದರೂ ವಸ್ತುಗಳನ್ನು ಥಕ್ಕನೇ ಹೊಡೆದರೆ ಅದು ಮರಣ ಸೂಚಕ ಆಗಿರುತ್ತದೆ. ಪ್ರಶ್ನ ಕಾಲದಲ್ಲಿ ಹಾಳಾಗಿ ಹೋದ ಅಥವಾ ನಾಶವಾದ ವಸ್ತುಗಳ ವಿಷಯವಾಗಿ ವಿಚಾರ ಮಾಡುತ್ತಿದ್ದರೆ ಅಥವಾ ಸತ್ತುಹೋದ ಪ್ರಾಣಿಯು ಕಂಡು ಬಂದರೆ, ಅಥವಾ ಆ ವಿಚಾರ ಮಾತಾಡಿದರೆ ಅದು ಮರಣ ಸೂಚಕ ಎಂದು ತಿಳಿಯಬೇಕು.

ಸುಪ್ತೇ ಮುಕ್ತಕಚೇ ಶುಚೌ ರುದತಿ ವಾ ಭಗ್ನಾಗಮೇ ಮುಂಡಿತೇ
ನಗ್ನೇ ಛಿಂದತಿ ನಿಂದತಿ ದ್ರವತಿ ವಾ ವಹ್ನೌ ಹವಿರ್ಜುಹ್ವತಿ ।
ದೂತೇ ಹಸ್ತಪದಾಂ ಚ ಬಂಧನಪರೇ ದೋಷ್ಣಾಕ್ಷಿಸಂಮರ್ದನೇ
ದೀನೇ ಕಾಷ್ಠತೃಣಾದಿಮರ್ದನಪರೇ ನ ಸ್ಯಾದ್ವಿಚಾರಃ ಶುಭಃ ॥

ಪ್ರಚ್ಛಕನು ನಿದ್ದೆಗಣ್ಣಿನಲ್ಲಿದ್ದು, ತಲೆಗೂದಲನ್ನು ಬಿಚ್ಚಿ, ಕೊಳಕಾಗಿದ್ದು, ಕೂಗುತ್ತಾ, ಮುಖವನ್ನು ಮುದುಡಿಕೊಂಡು, ಕ್ಷೌರ ಮಾಡಿ ಬಂದು, ಯಾವುದಾದರೂ ಒಂದು ವಸ್ತುವನ್ನು ತುಂಡು ಮಾಡುತ್ತಾ ಅಥವಾ ಸಿಗಿಯುತ್ತಾ ಅಗ್ನಿಗೆ ಹವಿಸ್ಸನ್ನು ನೀಡುತ್ತಾ, ಕೈ-ಕಾಲುಗಳನ್ನು ಕಟ್ಟಿಕೊಂಡು, ಕಣ್ಣುಗಳನ್ನು ತಿಕ್ಕುತ್ತಾ, ಮುಖವನ್ನು ಸಿಂಡರಿಸಿ, ಕಟ್ಟಿಗೆ ಅಥವಾ ಹುಲ್ಲನ್ನು ಕಟ್ಟುತ್ತಾ ಪ್ರಶ್ನೆಯನ್ನು ಕೇಳಿದರೆ, ಅವನು ಎಣಿಸಿದ ವಿಚಾರವು ಒಳ್ಳೆದಲ್ಲ ಹಾಗೂ ಕೈಗೂಡುವುದಿಲ್ಲ ಎಂದು ತಿಳಿಯಬೇಕು.

ಪಾಶೋದ್ವರ್ತನಕೇ ನಖೈರ್ಲಿಖತಿ ವಾಪ್ಯುತ್ಸಾರಿತೇ ಮಾರಿತೇಸಾಭ್ಯ-
-ಂಗೇ ಭಸಿತಾಸ್ಥಿಸೀಸಶಕೃತಾಂ ಭರ್ತರ್ಯಪಿ ವ್ಯಾಧಿತೇ । ವಸ್ತ್ರ-
ಪ್ರಾವೃತಕಂಧರೇ ಚ ಮಲಿನೇ ರೂಕ್ಷಾಶುಭಾಲಾಪಿನಿ ಪ್ರಶ್ನೋ
ನೈವ ಶುಭಾಯ ನಿರ್ವಪತಿ ವಾ ಪಿಣ್ಡಾನ್ ಪರೇತಾನ್ ಪ್ರತಿ ॥೧೧॥

ಪ್ರಚ್ಛಕನು ಹಗ್ಗವನ್ನು ಸುರುಳಿ ಮಾಡುತ್ತಿದ್ದರೆ, ಉಗುರಿನಿಂದ ನೆಲವನ್ನು ಗೀರುತ್ತಿದ್ದರೆ, ತಾನು ಕೂತ ಸ್ಥಳದಿಂದ ಬದಿಗೆ ತಳ್ಳಲ್ಪಟ್ಟರೆ, ಅಥವಾ ಅಡ್ಡಗಟ್ಟಿ

ಲ್ಪಟ್ಟರೆ, ದೇಹಕ್ಕೆ ಎಣ್ಣೆ ಹಚ್ಚಿಕೊಂಡಿದ್ದರೆ, ಬೂದಿ, ಎಲುಬು, ಸೀಸ ಅಥವಾ ಗೊಬ್ಬರ ಇವುಗಳನ್ನು ಒಟ್ಟು ಮಾಡುತ್ತಿದ್ದರೆ, ವ್ಯಾಧಿ ಅಥವಾ ಶೋಕ ಉಳ್ಳವನಂತೆ ಕಂಡು ಬಂದರೆ, ಕೊಳಕು ವಸ್ತ್ರವನ್ನು ಸುತ್ತಿಕೊಂಡಿದ್ದರೆ, ಕರ್ಕಶವಾದ ಮಾತು ಅಥವಾ ಶಬ್ದ ಮಾಡುತ್ತಿದ್ದರೆ, ಪ್ರೇತಗಳಿಗೆ ಪಿಂಡಗಳನ್ನು ಹಾಕುತ್ತಿದ್ದರೆ ಆ ಕಾಲದಲ್ಲಿ ಕೇಳಿದ ಪ್ರಶ್ನೆಯು ಶುಭಕರವಲ್ಲ ಹಾಗೂ ಅಶುಭ ಫಲ ಸಂಭವಿಸುತ್ತದೆ.

**ವಾಸೀಖಡ್ಗಪಲಾಲಜಾಲಕತುಷಾಪಾದತ್ರಪಿಂಛತ್ವಚಾಂ ಶೃಙ್ಗಸ್ಯಾಪಿ ಚ ವಾಹಕೇ ಚ ವಿಕಲೇ ಸಂಮಾರ್ಜನೀಧಾರಿಣೆ । ಪ್ರೇತಾಲಂಕೃತಿಶೂರ್ಪಪಾಶಮುಸಲಾನ್ ಭರ್ತರ್ಯುಪೇತೇ ಕ್ಷುಧಾ ದೈವಜ್ಞೇಽಪಿ ಚ ಪೃಚ್ಛಕೇ ನ ಚ ಶುಭೋ ಜ್ಞೇಯೋ ವಿಚಾರಃ ಕ್ವಚಿತ್ ॥೧೨॥**

ಪ್ರಚ್ಛಕನ ಕೈಯಲ್ಲಿ ಖಡ್ಗ, ಚೂರಿ, ಕತ್ತಿ, ಹುಲ್ಲು, ಬಲೆ, ಹೊಟ್ಟು, ಪಾದರಕ್ಷೆ, ಗರಿ, ಅಥವಾ ಕೊಂಬು ಇದ್ದರೆ, ಅಂಗಹೀನನಾದರೆ, ಹಿಡಿಸೂಡಿ ಕೈಯಲ್ಲಿ ಇದ್ದರೆ, ಪ್ರೇತಗಳಿಗೆ ಅಲಂಕರಿಸುವ ವಸ್ತು, ಗೆರಸೆ, ಹಗ್ಗ, ಒನಕೆ, ಕೈಯಲ್ಲಿ ಇದ್ದರೆ, ದೈವಜ್ಞನು ಅಥವಾ ಪ್ರಚ್ಛಕನು ಹಸಿವೆ ಉಳ್ಳವನಾದರೆ, ಆ ಕಾಲದಲ್ಲಿ ಪ್ರಶ್ನೆ ಕೇಳಿದರೆ ಅಶುಭಫಲ ಸಂಭವಿಸುತ್ತದೆ.

**ದೌರ್ಮುಖ್ಯಂ ವದನಾರೂಢಶೋಕಕೋಪಶ್ರಮಾದಿಭಿಃ ।**
**ವೈಮನಸ್ಯಂ ಚ ದೂತಸ್ಯ ಯೇನಕೇನಾಪಿ ದೋಷಕೃತ್ ॥೧೩॥**

ಪ್ರಚ್ಛಕನ ಮುಖದಲ್ಲಿ ವ್ಯಸನದ ಛಾಯೆ, ಸಿಟ್ಟು, ಬಳಲುವಿಕೆ, ಅಥವಾ ಬಾಡುವಿಕೆ ಇದ್ದರೆ ಆತನು ಕೇಳಿದ ಪ್ರಶ್ನೆಯ ಫಲವು ಅಶುಭ ಎಂದು ತಿಳಿಯಬೇಕು.

**ಸುಂದರಶ್ಚ ಕುಲೀನಶ್ಚ ವಿನಯೀ ಚ ನಿರಾಮಯಃ ।**
**ಸುಪ್ರಸನ್ನಶ್ಚ ದೂತಶ್ಚೇತ್ತ ಷ್ಟಾ ಸುಖಮವಾಪ್ನುಯಾತ್ ॥೧೪॥**

ಪ್ರಚ್ಛಕನ ದೂತನು ಸೌಂದರ್ಯವಂತನು, ಕುಲೀನ ಮನೆತನದವನು, ವಿನಯತೆ ಉಳ್ಳವನು, ಆರೋಗ್ಯವಂತನು, ಪ್ರಸನ್ನತೆಯಿಂದ ಕೂಡಿದವನು ಆಗಿದ್ದರೆ ಆತನು ಕೇಳುವ ಪ್ರಶ್ನೆಯು ಶುಭಫಲ ನೀಡುತ್ತದೆ.

ಉನ್ಮಿಷದಂಬಕಯುಗಳೋ ಮಂಗಲಪದಾರ್ಥ ದೃಢತರನಿಹಿತೇಕ್ಷ್ಣ:।
ಅಥಊರ್ಧ್ವೇಕ್ಷಣರಹಿತೋ ಲಭತೇಭೀಷ್ಟಂ ಪ್ರತೀಪದೃಗ್ದು:ಖಮ್॥

ಪೃಚ್ಛಕನ ದೂತನು ಅರುಳುತ್ತಿರುವ ಕಣ್ಣುಗಳು ಉಳ್ಳವನು, ಉತ್ತಮ ವಸ್ತುವಿನಲ್ಲಿ ದೃಷ್ಟಿ ಉಳ್ಳವನು, ಕೆಳಗಡೆ ಅಥವಾ ಮೇಲ್ಗಡೆ ನೋಡದೆ ನೇರ ವಾಗಿ ನೋಡುತ್ತಿರುವವನು ಆಗಿದ್ದರೆ ಪ್ರಶ್ನೆಯ ಅಭೀಷ್ಟ ಪೂರೈಸಲ್ಪಡುತ್ತದೆ. ಇದಕ್ಕೆ ವ್ಯತ್ಯಯವಾಗಿ ದೂತನು ಕಣ್ಣುಗಳನ್ನು ಮುಚ್ಚುತ್ತಿದ್ದರೂ, ಅಶುಭ ವಸ್ತುಗಳನ್ನು ನೋಡುತ್ತಿದ್ದರೆ, ಮೇಲೆ ಅಥವಾ ಕೆಳಗೆ ನೋಡುತ್ತಿದ್ದರೆ ಪ್ರಶ್ನೆಯ ಫಲವು ಅಶುಭ ಆಗಿರುತ್ತದೆ.

ತೋಯಾರ್ದ್ರಭಿನ್ನಮಲಿನಾರುಣನೀಲವಾಸಾ ರಕ್ತಪ್ರಸೂನಭೃ-
ದಪಿ ವ್ಯಸನಂ ಪ್ರಯಾತಿ । ವಾಸ: ಸಿತಂ ಸುರಭಿಗೌರಸುಮಾನು-
ಲೇಪಭೂಷಾ ದಧಚ್ಚ ಖಲು ಮಂಗಲಮೇತಿ ನೂನಮ್ ॥೧೬॥

ಪೃಚ್ಛಕನು ಒದ್ದೆಯಾದ ಹರಿದು ಹೋದ ಅಥವಾ ಕೊಳಕಾಗಿರುವ ಬಟ್ಟೆ ಉಟ್ಟುಕೊಂಡಿದ್ದರೆ, ಅಥವಾ ಅರುಣ ವರ್ಣದ ಅಥವಾ ನೀಲಿಬಣ್ಣದ ವಸ್ತ್ರ ಉಟ್ಟುಕೊಂಡಿದ್ದರೆ, ಕೆಂಪು ವರ್ಣದ ಹೂ ಧರಿಸಿದ್ದರೆ, ಪ್ರಶ್ನೆಯಫಲವು ಅಶುಭ ಆಗಿರುತ್ತದೆ. ಪೃಚ್ಛಕನು ಬಿಳಿವಸ್ತ್ರವನ್ನು ಧರಿಸಿದ್ದರೆ ಪರಿಮಳ ಉಳ್ಳ ಹೂ ಅಥವಾ ಅರಸಿನಬಣ್ಣದ ಹೂ, ಪರಿಮಳ ದ್ರವ್ಯ, ಆಭರಣ ಧರಿಸಿದ್ದರೆ ಪ್ರಶ್ನೆಯ ಫಲವು ಶುಭಕರ ಆಗಿರುತ್ತದೆ.

ಬಿಭ್ರಾಣೋ ಮಂಗಲದ್ರವ್ಯಂ ಪೃಚ್ಛಕೋ ಯಾತಿ ಮಂಗಲಮ್ ।
ರಿಕ್ತಪಾಣಿರಮಂಗಲ್ಯದ್ರವ್ಯಭೃಚ್ಚಾಶುಭಂ ವ್ರಜೇತ್ ॥೧೭॥

ಪೃಚ್ಛಕನು ಮಂಗಲ ದ್ರವ್ಯಗಳನ್ನು ಕೈಯಲ್ಲಿ ಹಿಡಿದುಕೊಂಡು ಪ್ರಶ್ನೆ ಯನ್ನು ಕೇಳಿದರೆ ಅವನಿಗೆ ಶುಭಫಲ ಲಭಿಸುತ್ತದೆ. ಅವನು ಬರಿ ಕೈಯಲ್ಲಿ ಅಥವಾ ಅಶುಭ ವಸ್ತುಗಳನ್ನು ಹಿಡಿದುಕೊಂಡು ಪ್ರಶ್ನೆ ಕೇಳಿದರೆ ಅವನಿಗೆ ಅಶುಭಫಲ ಸಂಭವಿಸುತ್ತದೆ.

ಪ್ರಶ್ನಕಾಲೇ ಶುಭೇ ಪೃಷ್ಟು: ಸ್ಥಿತಿಸ್ಪರ್ಶೇಕ್ಷಣಾದಿಕೇ ।
ದೈವಜ್ಞಚಿತ್ತೇ ತುಷ್ಟೇ ಚ ಸ್ಯಾದಿಷ್ಟಾರ್ಥಸಮಾಗಮ: ॥೧೮॥

ಪ್ರಶ್ನಕಾಲದಲ್ಲಿ ಪ್ರಚ್ಛಕನ ಸ್ಥಿತಿ-ಚೇಷ್ಟೆ ಇತ್ಯಾದಿ ಇರುವಿಕೆ, ವಸ್ತುಗಳನ್ನು ಸ್ಪರ್ಶಿಸುವಿಕೆ, ಅಥವಾ ನೋಡುವಿಕೆ ಮೊದಲಾದವು ಉತ್ತಮವಿದ್ದರೆ, ಆ ಕಾಲ ದಲ್ಲಿ ದೈವಜ್ಞನು ಪ್ರಸನ್ನ ಚಿತ್ತನಾಗಿದ್ದರೆ ಪ್ರಚ್ಛಕನ ಸಕಲ ಅಭಿಷ್ಟಗಳು ಕೈಗೂಡುತ್ತವೆ.

**ಮನೋಗತಫಲಪ್ರಾಪ್ತಿರಶುಭೇಷ್ವೇಷು ನೋ ಭವೇತ್ ।**
**ಮಿಶ್ರೇಷು ಯೋಷಾಮಾಧಿಕ್ಯಂ ಫಲಂ ತೇಷಾಂ ವಿನಿರ್ದಿಶೇತ್ ॥**

ಹಿಂದೆ ಹೇಳಿದ ಪ್ರಚ್ಛಕನ ಮತ್ತು ದೈವಜ್ಞನ ಸ್ಥಿತಿ-ಚೇಷ್ಟೆ ಇತ್ಯಾದಿ ಅಶುಭವಾಗಿದ್ದರೆ ಚಿಂತಿತ ಪ್ರಶ್ನೆಯು ಫಲವು ಫಲಿಸುವುದಿಲ್ಲ. ಈ ಸ್ಥಿತಿಯು ಮಿಶ್ರನಾಗಿದ್ದರೆ ಚಿಂತಿತ ಫಲವೂ ಕೂಡಾ ಶುಭಾಶುಭ ಮಿಶ್ರವಾಗಿ ಸಂಭವಿಸುತ್ತದೆ.

## ವಿವಾಹ ಪ್ರಶ್ನೆಗೆ ಸಂಬಂಧಪಟ್ಟ ಶಕುನಗಳು.

**ಸ್ಪರ್ಶೋ ದಕ್ಷಿಣಬಾಹುವಕ್ತ್ರಶಿರಸಾಂ ಪಾಣಿಗ್ರಹೇ ಸಿದ್ಧಿಕೃತ್ ।**
**ಜಾನ್ವಂಘ್ರ್ಯೋಸ್ತು ವಿಳಂಬಕೃತ್ಪರಕರೇ ಪ್ರಷ್ಠೋಕಟಾ ವಿಘ್ನಕೃತ್॥**

ವಿವಾಹ ಪ್ರಶ್ನೆಯಲ್ಲಿ ಪ್ರಚ್ಛಕನು ಬಲಕೈ, ಬಲಭುಜ ಅಥವಾ ತಲೆಯನ್ನು ಮುಟ್ಟಿಕೊಂಡು ಪ್ರಶ್ನೆ ಕೇಳಿದರೆ ಆ ನೆಂಟಸ್ಥಿಕೆಯು ಕೂಡಿ ಬರುತ್ತದೆ ಎಂದು ತಿಳಿಯಬೇಕು. ಪ್ರಚ್ಛಕನು ಮೊಣಕಾಲು, ಕಣಕಾಲು ಅಥವಾ ಪಾದಗಳನ್ನು ಮುಟ್ಟಿಕೊಂಡು ಪ್ರಶ್ನೆ ಕೇಳಿದರೆ ವಿಳಂಬದಿಂದ ವಿವಾಹ ಆಗುತ್ತದೆ. ಪ್ರಚ್ಛಕನು ಬೆನ್ನನ್ನು ಅಥವಾ ಸೊಂಟವನ್ನು ಮುಟ್ಟಿಕೊಂಡು ಪ್ರಶ್ನೆ ಕೇಳಿದರೆ ವಿವಾಹದಲ್ಲಿ ವಿಘ್ನಗಳು ಸಂಭವಿಸುತ್ತದೆ.

**ಸ್ತ್ರೀಭ್ಯಾಂಯುಕ್ತೇನಪುಂಸಾ ಪರಿಣತನ್ಯಯುಜಾ ಗೋವೃಷಾಭ್ಯಾಂ ಮುಷಾಭ್ಯಾಮ್ । ಆರಬ್ಧಾ ಪ್ರಶ್ನಕೃತ್ಯಾ ಪುನರುಪಯಮನಶ್ಲಾಘಿ-ವಾಚಾ ತಥೈತ್ತೈಃ ॥೨೧॥**

1. ಪ್ರಶ್ನಕಾಲದಲ್ಲಿ ಎರಡು ಹೆಂಗಸರೊಡನೆ ಒಬ್ಬ ಗಂಡಸು ಬಂದರೆ, 2. ಮುದುಕರಾದ ದಂಪತಿಗಳು ಬಂದರೆ, 3. ಒಂದು ದನ ಮತ್ತು ಎರಡು ಹೋರಿ ಬಂದರೆ, 4. ಪ್ರಶ್ನಕಾಲದಲ್ಲಿ ಯಾರಾದರೂ ಎರಡನೇ ಮದುವೆ ವಿಚಾರ ಮಾತಾಡುತ್ತಿದ್ದರೆ ಎರಡನೇ ಮದುವೆ ಉಂಟೆಂದು ತಿಳಿಯಬೇಕು.

ಪಾರಾಂತೀತರ ಲೋಹಿತಾರ್ಥವ ಸಮಾಲೋಕೇ ಚ ಕಂಡೂಯನಾ । ಪ್ರೇಕ್ಷಾಯಾಮಸ್ಯಕೀಕ್ಷಣೇ ಚ ಭವಿತಾ ವಿಘ್ನೋರಜೋನಿರ್ಗ- ಮಾತ್ ಆರಾವಶ್ರವಣೇ ಉಲಾಯ ಗಜಯೋಃ ರಕ್ತಾರ್ತವಾಲೋ- ಕನೇ ರೇಖಾಯಾಂ ಯದಿ ಚಕ್ರಮಧ್ಯರಚಿತಾಂಭೋಜೇನ್ಯಸೇದ್ವಾ- ಪಣಮ್ ॥೨೨॥

ಪಾದರಿಪುಷ್ಪವನ್ನು ಹೊರತು ಬೇರೆ ಕೆಂಪು ಹೂವನ್ನು ನೋಡಿದರೆ, ತುರಿಸುವುದನ್ನು ನೋಡಿದರೆ, ಅಥವಾ ರಕ್ತವನ್ನು ನೋಡಿದರೆ, ಆ ಹೆಣ್ಣಿನ ರಜೋನಿರ್ಗಮನದಿಂದ ವಿವಾಹಕ್ಕೆ ವಿಘ್ನ ಆಗುತ್ತದೆ ಎಂದು ತಿಳಿಯಬೇಕು. ಪ್ರಶ್ನಕಾಲದಲ್ಲಿ ಕೋಣ ಅಥವಾ ಆನೆಯ ಕೂಗು ಕೇಳಿಬಂದರೆ, ರಕ್ತವರ್ಣದ ಹೂ ನೋಡುವುದು, ಪ್ರಚ್ಛಕನು ಕಾಣಿಕೆಯನ್ನು ಇಡುವಾಗ ರಾಶಿಕುಂಡಲಿಯ ಮಧ್ಯದಲ್ಲಿರುವ ಚತುರ್ದಳ ಪದ್ಮದಲ್ಲಿ ಕಾಣಿಕೆಯನ್ನು ಇಟ್ಟರೂ ಆ ವಿವಾಹವು ಕೂಡಿ ಬರುವುದಿಲ್ಲ ಎಂದು ತಿಳಿಯಬೇಕು.

ವಿಶ್ಲೇಷೇ ಕರಯೋಃ ಕರಯೋಪಿಶವಾಲೋಕೇಮೃತಿಪ್ರೇಕ್ಷಣೇ ವ್ಯಾಹನ್ಯೇತ ಕರಗ್ರಹಃ ಕಲಹವಾಕ್ಕರ್ಣನ್ಯೇಪಿ ಧ್ರುವಂ । ಆಶೂ- ದ್ವಾಹ ವಿಧಾಯಿಲಕ್ಷಣಮಿದಂ ಯತ್ರೋಚ್ಛತೇ ತ್ರತ್ಪರಂ ತತ್ತ- ಲ್ಲಕ್ಷಣ ದರ್ಶನೇತು ಕಥಯೇತ್ ತತ್ತತ್ಫಲಂ ನಿಶ್ಚಯಾತ್ ॥೨೩॥

ಪ್ರಶ್ನಕಾಲದಲ್ಲಿ ಕೈಕೈ ಹಿಡಿದು ಹೋಗುತ್ತಿರುವ ಇಬ್ಬರು ಅಕಸ್ಮಾತ್ ಕೈಯನ್ನು ಬಿಂಗಡಿಸಿದರೆ, ಹೆಣವನ್ನು ನೋಡಿದರೆ, ಸಾಯುವುದು ಕಂಡರೆ, ಹತ್ತಿರದಲ್ಲಿಯೇ ಕಿವಿಗೆ ಕೇಳುವಂತೆ ಯಾರಾದರೂ ಜಗಳ ಮಾಡುತ್ತಿರುವುದು ಕಂಡುಬಂದರೆ, ಆ ವಿವಾಹವು ಕೂಡಿಬರುವುದಿಲ್ಲ ಎಂದು ತಿಳಿಯಬೇಕು.

ಅನೀತಿರ್ವಸನಸ್ಯ ವಿಕ್ರಯಕೃತೇ ದೌತಂಕರೇ ತನ್ನವಂ ಕಟ್ಯಾಂ ಬಿಭ್ರತ ಆಗಮಶ್ಚ ನಿತರಾಂ ಮಿಷ್ಟಸ್ಯ ಪೃಚ್ಛಾವಿಧೌ । ಜಂತುರ್ವಾ ಮಿಥುನೇಕ್ಷಣಂಚ ನಚಿರಾದುದ್ವಾಹದಂ ಪೃಚ್ಛತಾಂ ಸ್ತ್ರೀದೋಷಂ ಖನನಂಕ್ಷಿತೇಃ ಕ್ರಕಚಶಬ್ದೋವಾ ಸಮಾವೇದಯೇತ್ ॥೨೪॥

ವಿವಾಹ ಕೂಡಿಬರುವ ಲಕ್ಷಣಗಳು:-ಪ್ರಶ್ನಕಾಲದಲ್ಲಿ ಮಾರಾಟಕ್ಕೆ ಜವುಳಿ ಕಟ್ಟನ್ನು ತಂದರೆ, ಮಡಿವಸ್ತ್ರ ಅಥವಾ ಹೊಸವಸ್ತ್ರವನ್ನು ಉಟ್ಟುಕೊಂಡು

ಬಂದರೆ, ಹೆಣ್ಣು-ಗಂಡು, ಪ್ರಾಣಿಗಳ ಜೋಡಿ ಅಲ್ಲಿಗೆ ಬಂದರೆ, ಶೀಘ್ರದಲ್ಲಿಯೇ ವಿವಾಹ ಜರಗುತ್ತದೆ ಎಂದು ಹೇಳಬೇಕು.

ಪ್ರಶ್ನಕಾಲವಲ್ಲಿ ಯಾರಾದರೂ ನೆಲವನ್ನು ಅಗೆಯುತ್ತಿದ್ದರೆ, ಮರವನ್ನು ಗರಗಸದಿಂದ ಸಿಗಿಯುವ ಶಬ್ದ ಕೇಳಿಬಂದರೆ, ಆ ಹೆಣ್ಣುದೋಷ ಉಳ್ಳವಳು ಎಂದು ತಿಳಿಯಬೇಕು.

ವಾಸೋ ವಿಸ್ಖಲನಂ ಪುಂಸಾಕಸ್ಯಚಿದ್ಯೋಷಿತೋಽಥವಾ ।
ಪ್ರಶ್ನಸಮಯೇ ಯದಿ ದುಷ್ಟೇವ ಕನ್ಯಕಾ ॥೨೫॥

ವಿವಾಹ ಪ್ರಶ್ನಕಾಲದಲ್ಲಿ ಅಲ್ಲಿರುವ ಪುರುಷ ಅಥವಾ ಸ್ತ್ರೀಯ ಸೊಂಟದಲ್ಲಿರುವ ವಸ್ತ್ರವು ಬಿಚ್ಚಿಹೋದರೆ ವಧುವು ದುಷ್ಟೆ ಎಂದು ತಿಳಿಯಬೇಕು.

ರಂಧ್ರೇಙ್ಗುಲಿಪ್ರವೇಶೇ ತು ಕನ್ಯಾಯಾ ದೂಷಣಂ ವದೇತ್ ।
ಯಸ್ಯಾ ಯಃಕಶ್ಚಿದಾಗಚ್ಛೇದ್ವಿವಾಹೋಽಸ್ಯಾಂ ದಿಶೀಯರ್ತಾವರ್ ॥

ಪ್ರಶ್ನಕಾಲದಲ್ಲಿ ಯಾರಾದರೂ ತನ್ನ ಬೆರಳನ್ನು ಯಾವುದಾದರೂ ತೂತಿನಲ್ಲಿ ಇಟ್ಟರೆ, ಕನ್ಯೆಯು ದೂಷಿತಳು ಎಂದು ತಿಳಿಯಬೇಕು.

ಪ್ರಶ್ನಕಾಲದಲ್ಲಿ ಯಾರಾದರೂ ಒಬ್ಬನು ಪ್ರಚ್ಛಕನ ಸಮೀಪ ಬಂದರೆ, ಕನ್ಯೆಯ ವಿವಾಹವು ಆತನು ಬಂದ ದಿಕ್ಕಿನ ವರನೊಂದಿಗೆ ಘಟಿಸುತ್ತದೆ ಎಂದು ತಿಳಿಯಬೇಕು.

ವಿಕ್ರೇತುಂ ಸಮುಪಾನಯೇತ್ಯದಿತದಾಕುಂಡೀ ವಿಹಾಯೇತರತ್ಪಾತ್ರಂ ಲೋಹಮಯಂ ಸಪುಚ್ಛಮುಕರಾ ಲೋಕಸ್ಯತಾಂಬೇಕ್ಷಣಂ ಆಲೋಕಃ ಕಳಧೌತ ನಿರ್ಮಿತಪದಾರ್ಥಾನಾಂ ದೃಗಾಮರ್ಶನಂ ತತ್ರೋದ್ವರ್ತಿಸ್ಥಿತಸೂಪವೇತದೃಗವಿೂ ಕ್ಷಿಪ್ರಂ ವಿವಾಹಪ್ರದಾಃ ॥

**ಶೀಘ್ರ ವಿವಾಹ ಸಂಭವಿಸುವ ಲಕ್ಷಣಗಳು:**-ವಿವಾಹ ಪ್ರಶ್ನಕಾಲದಲ್ಲಿ ಗಿಂಡಿಯನ್ನು ಹೊರತು ತಾಮ್ರ ಅಥವಾ ಲೋಹದ ಪಾತ್ರೆ ಪದಾರ್ಥಗಳನ್ನು ಅಲ್ಲಿಗೆ ತೆಗೆದುಕೊಂಡು ಬಂದರೆ, ಕನ್ನಡಿಯನ್ನು ನೋಡಿದರೆ, ತುಂಬೆ ಹೂ ತಂದರೆ, ಶುದ್ಧವಾದ ಬಂಗಾರದಿಂದ ಮಾಡಲ್ಪಟ್ಟ ಹೊಸ ಆಭರಣ ನೋಡಿದರೆ, ಯಾರಾದರೂ ಕಣ್ಣನ್ನು ತಿಕ್ಕುತ್ತಿದ್ದರೆ, ಬ್ರಾಹ್ಮಣರು ಧರಿಸಿದ ನೂತನ ಜನಿವಾರವನ್ನು ಮೇಲಕ್ಕೆ ಎತ್ತಿ ಬಂದರೆ ವಿವಾಹವು ಶೀಘ್ರದಲ್ಲಿಯೇ ಘಟಿಸುತ್ತದೆ ಎಂದು ತಿಳಿಯಬೇಕು.

ದ್ರವ್ಯದ್ವಂದ್ವಮಪೀತರೇತರತವಾಬದ್ಧಂ ಯದಿಪ್ರೇಕ್ಷತೇ ದಂಪತ್ಯೋರಥ ದಂಪತ್ಯೋಃಶ್ಚ ಯಾದೃಚ್ಛಯೋಕ್ಷಣ ಸವಾಯಾನಾದಿಕಂ ವಾ ತದಾ। ಊರ್ಣಾಸೂತ್ರನಿಬದ್ಧ ಪಾಣೆಚರಣಾಶ್ಚ ಆವೇಕ್ಷಣಂ ಗಾನಿನಾವಾಯಾನಂಚ ಕರಗ್ರಹಾಯ ಕಲಭದ್ರವ್ಯೇಕ್ಷಣಂಚಾಚಿರಾತ್॥

ವಿವಾಹ ಪ್ರಶ್ನಕಾಲದಲ್ಲಿ ಎರಡು ದ್ರವ್ಯಗಳು ಒಂದಕ್ಕೊಂದು ಅಂಟಿಕೊಂಡಿದ್ದರೆ, ದಂಪತಿಗಳು ಆಮಂತ್ರಣವಿಲ್ಲದೆ ಅಲ್ಲಿಗೆ ಬಂದರೆ ಅಥವಾ ಅವರ ಸಂಭಾಷಣೆ ಕೇಳಿಬಂದರೆ, ಕಂಬಳಿಯ ನೂಲನ್ನು ಕಾಲಿಗೆ ಜಗಿಯಲ್ಪಟ್ಟವನು. ಸಂಗೀತಗಾರ, ವಾದ್ಯಗಾರ, ಬಂಗಾರದ ಆಭರಣ ಮಾಡುವವ ಅಥವಾ ಹೊಸ ಆಭರಣವನ್ನು ಯಾರಾದರೂ ಅಲ್ಲಿಗೆ ಹಿಡಿದುಕೊಂಡು ಬಂದರೆ, ಶೀಘ್ರದಲ್ಲಿಯೇ ವಿವಾಹ ಸಂಭವಿಸುತ್ತದೆ ಎಂದು ತಿಳಿಯಬೇಕು.

ನವವಸ್ತ್ರದ್ವಯಾದೀನಾಂ ದರ್ಶನಂ ಕರಸಙ್ಗ್ರಹೇ ।
ಸಿದ್ಧಯೇ ತದಸಿಧ್ಯೈ ಸ್ಯಾದ್ವಿಯೋಗಸ್ತು ಕಯೋರಪಿ ॥೨೯॥

ವಿವಾಹ ಪ್ರಶ್ನಕಾಲದಲ್ಲಿ ನೂತನ ವಸ್ತ್ರದ ಜೊತೆ, ಪುಷ್ಪ, ಫಲ ಇತ್ಯಾದಿಗಳು ಕಂಡು ಬಂದರೆ ಆ ವಿವಾಹವು ಕೈಗೂಡುತ್ತದೆಂದು ತಿಳಿಯಬೇಕು. ವಿವಾಹ ಪ್ರಶ್ನಕಾಲದಲ್ಲಿ ಯಾರಾದರೂ ಜೋಡಿಯಾಗಿ ಅಲ್ಲಿಗೆ ಬಂದು ಅನಂತರ ಬೇರೆ-ಬೇರೆಯಾಗಿ ಅಗಲಿಹೋದರೆ ಆ ವಿವಾಹವು ಕೈಗೂಡುವುದಿಲ್ಲ ಎಂದು ತಿಳಿಯಬೇಕು.

## ಸಂತಾನಪ್ರಶ್ನೆಗೆ ಸಂಬಂಧಪಟ್ಟ ಶಕುನಗಳು.

ಘುಟಿಕಾಪುಸ್ತಕಾದ್ಯಂ ಯದ್ವಿದ್ಯಾಭ್ಯಸನಸಾಧನಮ್ । ಕಿಂಕಿಣೀ-ಕಟಕಾದೀನಿ ಭೂಷಣಾನಿ ಶಿಶೋರಪಿ ॥೩೦॥ ಮೇಖಲಾಜಿನದಣ್ಡಾಶ್ಚ ಗರ್ಭಿಣೀ ಬಾಲಕಸ್ತಥಾ । ಏತೇಷಾಂ ದರ್ಶನಾದೀನಿ ಭವೇಯುಃ ಪುತ್ರಸಿದ್ಧಯೇ ॥೩೧॥

ಸಂತಾನ ವಿಚಾರ ಪ್ರಶ್ನೆಯಲ್ಲಿ ಪುಸ್ತಕ, ಲೇಖನಿ ಇತ್ಯಾದಿ ವಿದ್ಯಾಭ್ಯಾಸ ಸಾಧನಗಳು, ಮಕ್ಕಳ ಕೈ-ಕಾಲುಗಳಿಗೆ ತೊಡಿಸುವ ಗೆಜ್ಜೆಗಳು, ಮಕ್ಕಳ ಆಭರಣ, ಉಡಿದಾರ, ಕೃಷ್ಣಾಜಿನ, ಕೋಲು, ಗರ್ಭಿಣಿ ಮತ್ತು ಮಕ್ಕಳು ಕಂಡು ಬಂದರೆ ಸಂತಾನ ಆಗುತ್ತದೆ ಎಂದು ಹೇಳಬೇಕು.

ದರ್ಶನಂ ಜ್ವಲಿತಸ್ಯಾಗ್ನೇರ್ಮಲಾದಿತ್ಯಜನಂ ತನೋಃ ।
ಯಾನಂ ಕಸ್ಯಾಪಿ ತದ್ದೇಶಾದ್ಗರ್ಭಚ್ಛಿದ್ರಸ್ಯ ಸೂಚಕಮ್ ॥

ಗರ್ಭವಿಚಾರ ಪ್ರಶ್ನೆಯಲ್ಲಿ ಉರಿಯುತ್ತಿರುವ ಬೆಂಕಿ, ಶರೀರದ ಮಲಿನತೆ ವಿಸರ್ಜನೆ (ಕಿವಿ, ಮೂಗು ಇತ್ಯಾದಿ ರಂಧ್ರಗಳ ಕೊಳೆ ವಿಸರ್ಜನೆ) ಮಾಡುತ್ತಿದ್ದರೂ, ಅಲ್ಲಿದ್ದವರಲ್ಲಿ ಯಾರಾದರೂ ಒಬ್ಬನು ಆ ಸ್ಥಳವನ್ನು ಬಿಟ್ಟು ಹೋದರೂ ಗರ್ಭಸ್ರಾವ ಆಗುತ್ತದೆ ಎಂದು ತಿಳಿಯಬೇಕು.

## ವಿವಾದ ಪ್ರಶ್ನೆ

ದಕ್ಷಿಣಾಂಘ್ರಿಂ ಸ್ಥಿರೀಕೃತ್ಯ ಸ್ಥಿತಿರಾಯುಧಚಾಲನಮ್ । ಮರ್ದನಂ ದಕ್ಷಹಸ್ತಸ್ಯ ಜ್ವಲಿತಾಗ್ನಿಪ್ರದರ್ಶನಮ್ ॥೩೩॥ ಪುರುಷಸ್ಯ ಪ್ರಸಿದ್ಧಸ್ಯ ಪ್ರಸನ್ನಸ್ಯ ಚ ದರ್ಶನಮ್ । ಏತತ್‌ಷಟ್ಕಂ ವಿಶೇಷೇಣ ಯುದ್ಧಪ್ರಶ್ನೇ ಜಯಾವಹಮ್ ॥೩೪॥

ವಿವಾದ ಅಥವಾ ಯುದ್ಧದಲ್ಲಿ ಜಯಪ್ರಾಪ್ತಿ ಲಕ್ಷಣಗಳು:-ಪ್ರಶ್ನ ಕಾಲದಲ್ಲಿ 1. ಬಲಕಾಲನ್ನು ಬಲವಾಗಿ ಊರಿಕೊಂಡು ನಿಂತರೆ, 2. ಆಯುಧವನ್ನು ತಿರುಗಿಸುತ್ತಾ ಇದ್ದರೆ, 3. ಬಲಕೈಯನ್ನು ತಿಕ್ಕುತ್ತಿದ್ದರೆ, 4. ಪ್ರಜ್ವಲಿತ ಬೆಂಕಿ ಕಂಡು ಬಂದರೆ, 5. ಪ್ರಸಿದ್ಧ ವ್ಯಕ್ತಿ, 6. ಸುಪ್ರಸನ್ನ ವ್ಯಕ್ತಿ ಕಂಡು ಬಂದರೆ, ಈ ಆರು ಲಕ್ಷಣಗಳು ಯುದ್ಧದಲ್ಲಿ ಅಥವಾ ವಿವಾದದಲ್ಲಿ ಜಯ ಸೂಚಿಸುತ್ತದೆ.

ವಾಮಪಾದಂ ಸ್ಥಿರೀಕೃತ್ಯ ಸ್ಥಿತಿರ್ವಿಕ್ಲಬತಾ ಗಿರಃ । ಸಾಶ್ರುತಾ ಮಲಿನೇಕ್ಷಾ ಚ ನಿಯಮ್ಯಾಯುಧಧಾರಣಮ್ ॥೩೫॥ ಪರಾಜ. ಯಕರಾಃ ಪಂಚ ಯುದ್ಧಪ್ರಶ್ನೇ ವಿಶೇಷತಃ ॥೩೬॥

ವಿವಾದ ಅಥವಾ ಕಾಳಗದಲ್ಲಿ ಅಪಜಯ:-ಪ್ರಶ್ನಕಾಲದಲ್ಲಿ 1. ಎಡದ ಕಾಲನ್ನು ಬಲವಾಗಿ ಊರಿಕೊಂಡಿರುವುದು, 2. ಯಾರಾದರೂ ಕಣ್ಣೀರು ಸುರಿಸುತ್ತಿದ್ದರೆ, 3. ತೊದಲು ಅಥವಾ ತತ್ತರಿಸಿ ಮಾತಾಡಿದರೆ, 4. ಮಲಿನತೆ ಉಳ್ಳವನ್ನು ನೋಡಿದರೆ, 5. ಆಯುಧವನ್ನು ಒರೆಯಲ್ಲಿ ಹಾಕುತ್ತಿದ್ದರೆ, ಈ ಐದು ಲಕ್ಷಣಗಳು ವಿವಾದದಲ್ಲಿ ಅಪಜಯ ಸೂಚಿಸುತ್ತದೆ.

ಪಾಣಿಗ್ರಹಣಮನ್ಯೋನ್ಯಂ ದ್ವಯೋಃ ಕಸ್ಯಾಪಿ ಚಾಗಮಃ ।
ಸಂಧಯೋ ಭೇದಭೇದಾದಿ ಸರ್ವಂ ಸಂಧಿವಿರೋಧಕೃತ್॥೩೭॥

ವಿವಾದ ಪ್ರಶ್ನೆಯಲ್ಲಿ ಅಲ್ಲಿದ್ದವರಲ್ಲಿ ಯಾರಾದರಿಬ್ಬರು ಕೈ-ಕೈ ಹಿಡಿಯು ವುದು ಅಥವಾ ಅಲ್ಲಿಗೆ ಕೈ-ಕೈ ಹಿಡಿದು ಯಾರಾದರೂ ಇಬ್ಬರು ಬಂದರೆ ವಿವಾದವು ರಾಜಿಯಲ್ಲಿ ತಿರ್ಮಾನ ಆಗುತ್ತದೆ ಎಂದು ತಿಳಿಯಬೇಕು. ಪ್ರಚ್ಛಕನು ರಾಜಿಯ ವಿಚಾರವನ್ನು ಕೇಳುತ್ತಾ ಕಡ್ಡಿ-ಹುಲ್ಲು ಇತ್ಯಾದಿ ಯಾವುದಾದರೂ ವಸ್ತುವನ್ನು ತುಂಡು ಮಾಡುವುದು ಅಥವಾ ಸಿಗಿಯುತ್ತಿದ್ದರೆ ಆ ವಿವಾದವು ರಾಜಿ ಆಗುವುದಿಲ್ಲ ಎಂದು ತಿಳಿಯಬೇಕು.

### ಕಾರ್ಯ ಸಾಧನೆ ಲಕ್ಷಣ

**ಯತ್ಕಿಂಚಿತ್ ಕಾರ್ಯಮುದ್ದಿಶ್ಯ ಪ್ರಸ್ಥಾನೇ ಯದಿ ಪಶ್ಯತಿ ।**
**ಸುವರ್ಣಂ ವಾ ಫಲಂ ವಾ ಸ್ಯಾದ್ರವ್ಯಲಾಭೋ ನ ಸಂಶಯಃ॥**

ಯಾವುದಾದರೂ ಒಂದು ಕಾರ್ಯನಿಮಿತ್ತ ಹೋಗುವಾಗ ಅಕಸ್ಮಾತ್ ಬಂಗಾರ ಅಥವಾ ಹಣ್ಣು ನೋಡಿದರೆ ಆ ಕಾರ್ಯಜಯ, ಲಾಭಪ್ರಾಪ್ತಿ ಆಗುತ್ತದೆ.

### ರೋಗಪ್ರಶ್ನೆ-ನಿಮಿತ್ತ

**ಆರೂಹ್ಯ ವಾ ಸಮಾಶ್ರಿತ್ಯ ಜೀವವದ್ವಸ್ತು ಪೃಚ್ಛತಿ । ಪ್ರಶ್ನೇ ಚಾಗಚ್ಛತಿ ಪ್ರಾಣೀ ತಂ ದೇಶಂ ಪ್ರತಿ ಕಶ್ಚನ ॥೪೯॥ ಜೀವತ್ಯೇವ ಧ್ರುವಂ ರೋಗೀ ಮ್ರಿಯತೇ ವೈಪರೀತ್ಯತಃ ॥೪೦॥**

ರೋಗ ಪ್ರಶ್ನೆಯ ಕಾಲದಲ್ಲಿ ಯಾರಾದರೊಬ್ಬನು ಕುದುರೆಯೇ ಮೊದಲಾದ ಪ್ರಾಣಿಗಳ ಮೇಲೆ ಕೂತು ಅಲ್ಲಿಗೆ ಬಂದರೆ ಅಥವಾ ಯಾವುದಾದರೂ ಪ್ರಾಣಿಯನ್ನು ಹೊಂದಿಕೊಂಡು ಬಂದರೆ, ಅಥವಾ ಯಾವುದಾದರೂ ಒಂದು ಪ್ರಾಣಿಯು ಅಲ್ಲಿಗೆ ಬರುವುದು ಕಂಡು ಬಂದರೆ ರೋಗಿಯು ಬದುಕುತ್ತಾನೆ ಎಂದು ತಿಳಿಯಬೇಕು. ಇದಕ್ಕೆ ವಿಪರೀತ ಆದ್ದಲ್ಲಿ ಅಂದರೆ ಜೀವಇಲ್ಲದ ಪ್ರಾಣಿ ಇತ್ಯಾದಿಗಳೊಂದಿಗೆ ಅಲ್ಲಿ ಬಂದರೆ ರೋಗಿಯು ಬದುಕುವುದಿಲ್ಲ ಎಂದು ತಿಳಿಯಬೇಕು.

**ಪಿತೃಪುಷ್ಪಂ ತಿಲಂ ವಹ್ನಿರ್ನರ್ತನಂ ವಸನಂ ತಥಾ । ದರ್ಭದಧ್ಯಾದಿ ನಿಖಿಲಂ ಸಂಭೃತಂ ಪಿತೃಕರ್ಮಣೀ ॥೪೧॥ ಮರಣಾನಂತರಾಪೇಕ್ಷ್ಯಂ ದ್ರವ್ಯಂ ಯತ್ಸಕಲಂ ತು ತತ್ । ಏತೇಷಾಂ ದರ್ಶನಂ ನೂನಮಾಯುಃಪ್ರಶ್ನೇ ಮೃತಿಪ್ರದಮ್ ॥೪೨॥**

ರೋಗಿಯ ಮರಣ ಸೂಚಕ ನಿಮಿತ್ತಗಳು:-ರೋಗಪ್ರಶ್ನೆಯಲ್ಲಿ ಪಿಂಡದ ಅಲಂಕಾರಕ್ಕೆ ಉಪಯೋಗಿಸುವ ಹೂ, ಎಳ್ಳು, ನೂತನ ವಸ್ತ್ರ, ದರ್ಭೆಹುಲ್ಲು, ಮೊಸರು, ಹೆಣಸಾಗಿಸಲು ಉಪಯೋಗಿಸುವ ಸಾಧನಗಳು ಇತ್ಯಾದಿ ಕಂಡು ಬಂದರೆ ರೋಗಿಯು ಬದುಕುವುದಿಲ್ಲ ಎಂದು ತಿಳಿಯಬೇಕು.

## ಯಾತ್ರೆ ಪ್ರಶ್ನೆಯ ನಿಮಿತ್ತಗಳು.

ಶಯನಂ ಚೋಪವೇಶಶ್ಚ ಪೃಷ್ಟ್ವಾ ಯಾತ್ರಾ ವಿಘಾತಕೃತ್ ।
ಪಾದವ್ಯತ್ಯಾಸಸಂಕೋಚೌ ವಿಳಂಬನಕರೌ ಧ್ರುವಮ್ ॥೪೩॥
ಪೃಷ್ಟ್ವೋತ್ಥಾನಂ ಚ ಯಾನಂ ಚ ಯಾತ್ರಾಲಾಭಾಯ ಸತ್ವರಮ್॥

ಪ್ರಯಾಣ ವಿಚಾರ ಪ್ರಶ್ನೆಯಲ್ಲಿ 1. ಪ್ರಚ್ಛಕನು ನಿಂತುಕೊಂಡು ಕೇಳಿ ನಂತರ ಕೂತುಕೊಂಡರೆ ಅಥವಾ ಪ್ರಶ್ನೆಕೇಳಿ ನಂತರ ಮಲಗಿದರೆ ಆ ಪ್ರಯಾಣ ಆಗುವುದಿಲ್ಲ ಎಂದು ಹೇಳಬೇಕು. 2. ಪ್ರಚ್ಛಕನು ಪ್ರಶ್ನೆಕೇಳಿ ತನ್ನ ಕಾಲುಗಳನ್ನು ಅಲ್ಲಾಡಿಸುವುದು, ಅಥವಾ ಆಚೆ-ಈಚೆ ಇಡುವುದು, ಅಥವಾ ಒಂದು ಕಾಲಿನಲ್ಲಿ ನಿಂತರೆ ಆ ಪ್ರಯಾಣವು ವಿಳಂಬದಿಂದ ಆಗುತ್ತದೆ. 3. ಪ್ರಚ್ಛಕನು ಪ್ರಶ್ನೆಕೇಳಿ ಎದ್ದು ನಿಂತರೆ ಅಥವಾ ನಿಂತು ಪ್ರಶ್ನೆಕೇಳಿ ನಡೆಯುತ್ತಿದ್ದರೆ ಆ ಪ್ರಯಾಣವು ಶೀಘ್ರವೇ ಸಂಭವಿಸುತ್ತದೆ ಎಂದು ತಿಳಿಯಬೇಕು.

## ಅಶುಭ ಶಕುನಗಳು

ಹಾಹಾಖೇದರಸಂ ಕ್ಷುತಂ ಚ ಪತನಂ ಚೈತ್ಯಧ್ವಜಾದೇಸ್ತಥಾ
ವಸ್ತ್ರಛತ್ರಪದತ್ರವಿಕ್ಷತಿಮಪಿ ಧ್ವಂಸಾರ್ಥನಾನಾಗಿರಃ । ಕ್ರೂರಾ-
ಣಾಂ ಮೃಗಪಕ್ಷಿಣಾಂ ಪ್ರತಿದಿಶಂ ವಾಚಶ್ಚ ದೀಪಕ್ಷಯಃ ಪಾತಂ
ಪೂರ್ಣಘಟಾದಿಕಸ್ಯ ಚ ಬುಧಾಃ ಕಷ್ಟಂ ನಿಮಿತ್ತಂ ವಿದುಃ ॥೪೫॥

ಪ್ರಶ್ನಕಾಲದಲ್ಲಿ ಕಿವಿಗೆ ಕೇಳುವಂತೆ "ಹಾ-ಹಾ" "ಅಯ್ಯೋ" ಇತ್ಯಾದಿ ಮಾತುಗಳು ಕೇಳುತ್ತಿದ್ದರೆ, ಕಣ್ಣಿಗೆ ಕಾಣುವಂತೆ ಯಾವುದಾದರೂ ವಸ್ತು ಬಿದ್ದರೆ, ಧ್ವಜ, ಕಲಶ, ಕಂಭದ ತಲೆ ಇತ್ಯಾದಿ ಆಕಸ್ಮಿಕವಾಗಿ ಕೆಳಗೆ ಬಿದ್ದರೆ, ವಸ್ತ್ರ ಹರಿದುಹೋಗುವುದು, ಕೊಡೆಯಕಡ್ಡಿ, ಕೋಲು, ಮೆಟ್ಟು ಇತ್ಯಾದಿ ತುಂಡಾಗು ವುದು, ಹತ್ತಿರದವಲ್ಲಿಯೇ ಯಾರಾದರೂ "ಕಡಿ-ಬಡಿ" ಇತ್ಯಾದಿ ಧ್ವಂಸ ಆಗು ವಂಥಹ ಮಾತುಗಳನ್ನು ಆಡುವುದು ಮತ್ತು ಅಥವಾ ಕ್ರೂರ ಹಕ್ಕಿಗಳು, ಅಥವಾ

ಜೀವ ಜಂತುಗಳು ಕೂಗುತ್ತಿರುವುದು, ದೀಪವು ಆಕಸ್ಮಾತ್ತಾಗಿ ನಂದಿಹೋಗು ವುದು, ನೀರು ತುಂಬಿದ ಪಾತ್ರೆಯು ಕೆಳಗೆ ಬೀಳುವುದು ಇವೆಲ್ಲ ನಿಮಿತ್ತಗಳು ಅಶುಭ ಎಂದು ವಿದ್ವಾಂಸರಿಂದ ಹೇಳಲ್ಪಟ್ಟಿದೆ.

**ಮಾರ್ಜಾರಡುಣ್ಡುಭೋಲೂಕಗೋಧಾದ್ಯಶುಭದರ್ಶನಮ್ ।**
**ಗೌಳ್ಯಾ ರುತಂ ಚ ನಾಶಾಯ ವಾಮೇ ದಕ್ಷೇ ತಥಾ ಕ್ಷುತಮ್ ॥**
**ಪ್ರಶಸ್ತಾಃ ಕೀರ್ತನೇ ಕೋಲಗೋಧಾಹಿಶಶಜಾಹಕಾಃ। ನ ದರ್ಶನೇ**
**ನ ವಿರುತೇ ವಾನರರ್ಕ್ಷಾವತೋನ್ಯಥಾ ॥೪೭॥**

ಪ್ರಶ್ನಕಾಲದಲ್ಲಿ ಬೆಕ್ಕು, ಕೇರೆಹಾವು, ಗುಮ್ಮ, ಉಡು ಇತ್ಯಾದಿಗಳು ನೋಡಲ್ಪಡುವುದು, ಹಲ್ಲಿಯು ಎಡಬದಿಯಲ್ಲಿ ಲೊಚಗುಟ್ಟುವುದು, ಬಲಬದಿ ಯಲ್ಲಿ ಯಾರಾದರೂ ಸೀನುವುದು ಅಥವಾ ಕೆಮ್ಮುವುದು, ಇವೆಲ್ಲ ಅಶುಭಶಕುನ ಗಳು ಆಗಿರುತ್ತವೆ.

ಹಂದಿ, ಉಡು, ಹಾವು, ಮೊಲ ಇವುಗಳ ವಿಚಾರ ಮಾತಾಡುತ್ತಿದ್ದರೆ ಇದು ಶುಭಶಕುನ, ಆದರೆ ಅವುಗಳನ್ನು ನೋಡುವುದು ಅಶುಭ ಶಕುನ ಆಗಿರು ತ್ತದೆ. ಮಂಗ ಮತ್ತು ಕರಡಿಯನ್ನು ಪ್ರಶ್ನಕಾಲದಲ್ಲಿ ಪ್ರತ್ಯಕ್ಷವಾಗಿ ನೋಡು ವುದು ಶುಭಶಕುನ, ಆದರೆ ಅವುಗಳ ವಿಚಾರ ಯಾರಾದರೂ ಮಾತಾಡುವುದು ಅಶುಭ ಶಕುನ ಆಗುತ್ತದೆ.

## ಶುಭ ಶಕುನಗಳು

**ಮಾತಙ್ಗಾಶ್ವವೃಷಾದೀನಾಂ ಪೃಚ್ಛಾಕಾಲೇ ರುತಂ ಯದಿ ।**
**ತೇಷಾಂ ವಾ ದರ್ಶನಂ ತರ್ಹಿ ಪ್ರಷ್ಟಾಭೀಷ್ಟಮವಾಪ್ನುಯಾತ್ ॥**

ಪ್ರಶ್ನಕಾಲದಲ್ಲಿ ಆನೆ, ಕುದುರೆ, ಹೋರಿ ಇವುಗಳ ವಿಚಾರ ಮಾತಾಡು ವುದು ಅಥವಾ ಅವುಗಳ ಕೂಗು ಕೇಳಿ ಬರುವುದು ಅಥವಾ ಅವುಗಳು ನೋಡ ಲ್ಪಟ್ಟರೆ ಪ್ರಚ್ಛಕನ ಅಭೀಷ್ಟವು ಕೈಗೂಡುತ್ತದೆ ಎಂದು ತಿಳಿಯಬೇಕು.

**ವೀಣಾವೇಣುಮೃದಙ್ಗಶಂಖಪಠಹಧ್ವಾನಂ ಚ ಭೇರೀರವಂ ಗೀತಂ ಮಙ್ಗಲಮಙ್ಗನಾಂ ಚ ಗಣಿಕಾಂ ದಧ್ಯಕ್ಷತೇಕ್ಷ್ವಾದಿಕಮ್ । ದೂರ್ವಾಚಂದನಪೂರ್ಣಕುಂಭಕುಸುಮಂ ಮಾಲಾಂ ಫಲಂ ಕನ್ಯ ಕಾಂ ಘಂಟಾಂ ದೀಪಸರೋರುಹೇ ಚ ಶುಭದಂ ವಿದ್ಯಾನ್ನಿಮಿತ್ತಂ ಬುಧಃ ॥೪೮॥**

ಪ್ರಶ್ನಕಾಲದಲ್ಲಿ ವೀಣೆ, ಕೊಳಲು, ಮದ್ದಳೆ, ಶಂಖ, ಡಮರು, ಭೇರಿ ಇವುಗಳ ಧ್ವನಿಯು ಕೇಳಿಬರುವುದು ಶುಭಶಕುನ ಆಗಿರುತ್ತದೆ. ಸಂಗೀತ, ಮಂಗಲ ವಸ್ತು, ಮುತ್ತೈದೆ ಸ್ತ್ರೀ, ವೇಶ್ಯೆ, ಮೊಸರು, ಅಕ್ಷತೆ, ಕಬ್ಬು ಇತ್ಯಾದಿ ಗರಿಕೆ ಹುಲ್ಲು, ಚಂದನ, ನೀರು ತುಂಬಿದ ಕೊಡಪಾನ, ಹೂ, ಹೂವಿನಸರ, ಫಲ, ಕನ್ಯೆ, ಘಂಟೆ, ದೀಪ, ತಾವರೆ ಹೂ, ಇವುಗಳನ್ನು ನೋಡುವುದು ಶುಭಶಕುನ ಆಗಿರುತ್ತದೆ.

**ಛತ್ರಂ ತೋರಣ ಹೃದ್ಯಯಾನಶಕಟಂ ಸ್ತೋತ್ರಂ ಚ ವೇದಧ್ವನಿಂ ಬದ್ಧಂ ಚೈಕಪಶುಂ ವೃಷಂ ಚ ಮುಕುರಂ ಸ್ವರ್ಣಂ ಸವತ್ಸಾಂ ಚ ಗಾವಮ್ । ಭಕ್ಷ್ಯಂ ಚೋದ್ಧೃತಮೃತ್ತಿಕಾಂ ಬುಧವರಂ ಯಚ್ಚಾನ್ಯದಿಷ್ಟಂ ಶ್ರುತಂ ದೃಷ್ಟಂ ಶ್ರೋತ್ರದೃಶೋಃಶುಭಂ ತದಖಿಲಂ ಪ್ರಶ್ನೇ ನಿಮಿತ್ತಂ ವಿದುಃ ॥೫೦॥**

ಪ್ರಶ್ನ ಕಾಲದಲ್ಲಿ ಕೊಡೆ, ತೋರಣ, ಉತ್ತಮ ಅಥವಾ ಆಹ್ಲಾದಕರ ವಾಹನ, ಬಂಡಿ, ಸ್ತೋತ್ರ, ವೇದಘೋಷ, ಕಟ್ಟಲ್ಪಟ್ಟ ಒಂದು ಪಶು, ಹೋರಿ, ಕನ್ನಡಿ, ಬಂಗಾರ, ಕರುವಿನೊಂದಿಗೆ ಇರುವ ದನ, ಆಹಾರವಸ್ತು, ಕೈಯಲ್ಲಿಟ್ಟು ಕೊಂಡಿರುವ ಮಣ್ಣು, ಶ್ರೇಷ್ಠ ವಿದ್ವಾಂಸನ ಆಗಮನ ಇವುಗಳೆಲ್ಲ ಶುಭಶಕುನಗಳು ಆಗಿರುತ್ತವೆ. ಅಲ್ಲದೇ ಪ್ರಶ್ನಕಾಲದಲ್ಲಿ ಇಂಪಾದ ಶಬ್ದಗಳು ಕೇಳುವುದು, ರಮ್ಯವಾದ ವಸ್ತುಗಳನ್ನು ನೋಡುವುದು, ಇವೆಲ್ಲ ಶುಭ ಶಕುನಗಳು ಎಂದು ತಿಳಿಯಬೇಕು.

**ಲೋಕಾಚ್ಛಾಸ್ತ್ರಮುಖಾತ್ತಥಾ ಗುರುಮುಖಾದನ್ಯನ್ನಿಮಿತ್ತಾಂತರಂ ವಿಜ್ಞಾತವ್ಯಮತಃ ಶುಭಾಶುಭಫಲಂ ಪ್ರಾಜ್ಞೈಃ ಪ್ರಯತ್ನಾದಿಹ । ಯದ್ಯತ್ಪೃಚ್ಛತಿ ಪೃಚ್ಛಕೋಽನ್ತಿಕಗತಂ ತನ್ನಾಶಚಿಹ್ನಂ ಭವೇನ್ನಾಶಃ ಸ್ಯಾದಿಹ ತಸ್ಯ ತಸ್ಯ ನ ಚಿರಾತ್ತದ್ವ್ಯತ್ಯಯೋ ವ್ಯತ್ಯಯಃ ॥೫೧॥**

ಲೋಕ ವ್ಯವಹಾರದಿಂದ, ಶಾಸ್ತ್ರಾಧಾರದಿಂದ ಮತ್ತು ಗುರುಮುಖದಿಂದ ಆಯಾಯಾ ದೇಶ-ಕಾಲಕ್ಕೆ ಅನುಗುಣವಾದ ನಿಮಿತ್ತಗಳನ್ನು ಬುದ್ಧಿವಂತನಾದ ದೈವಜ್ಞನು ತಿಳಿದು ಕೊಳ್ಳಬೇಕು. ಪೃಚ್ಛಕನು ಪ್ರಶ್ನೆ ಕೇಳುವಾಗ, ಅದರ ನಾಶಕ್ಕೆ ಅನುಗುಣವಾದ ಶಕುನವು ಕಂಡು ಬಂದರೆ, ಅವನು ಕೇಳಿದ ವಿಚಾರವು ಕೈಗೂಡುವುದಿಲ್ಲ ಎಂದು ತಿಳಿಯಬೇಕು. ಆತನ ಪ್ರಶ್ನೆಗೆ ಅನುಕೂಲವಾದ ಶಕುನವು ಆ

ಕಾಲದಲ್ಲಿ ಕಂಡು ಬಂದರೆ ಅವನು ಕೇಳಿದ ವಿಚಾರವು ಕೈಗೂಡಿ ಬರುತ್ತದೆ ಎಂದು ತಿಳಿಯಬೇಕು.

**ಜ್ಞಾತ್ವೈಃ ತತ್ಸಕಲಂ ಸಮ್ಯಕ್ಸಮಯಾದಿ ಶುಭಾಶುಭವಮ್ ।**
**ಏತೈರೇವಾಖಿಲ ವಕ್ತುಂ ಶಕ್ಯೇ ಪ್ರಷ್ಟುಃ ಶುಭಾಶುಭವಮ್ ॥೫೨॥**

ಈ ತನಕ ಹೇಳಿದ ಶುಭಾಶುಭ ಶಕುನಗಳು, ಪ್ರಚ್ಛಕನಿಗೆ ಸಂಭವಿಸಬಹು ದಾದ ಶುಭಾಶುಭಫಲಗಳನ್ನು ಹೇಳಲು ಉಪಯುಕ್ತ ಆಗಿರುತ್ತವೆ.

## ಬೃಹತ್ ಸಂಹಿತಾ ಅಂಗಲಕ್ಷಣ

**ದೈವಜ್ಞೇನ ಶುಭಾಶುಭಂ ದಿಗುದಿತಸ್ಥಾನಾಹೃತಾನೀಕ್ಷತಾವಾಚ್ಯಂ ಪ್ರಷ್ಟುನಿಜಾಪರಾಙ್ಗಘಟನಾಂ ಚಾಲೋಕ್ಯಕಾಲಂ ಧಿಯಾ । ಸರ್ವಜ್ಞೋ ಹಿ ಚರಾಚರಾತ್ಮಕತಯ್ಯಾಸೌ ಸರ್ವದರ್ಶೀ ವಿಭುಶ್ಚೇಷ್ಟಾವ್ಯಾಹೃತಿಭಿಃ ಶುಭಾಶುಭಫಲಂ ಸಂದರ್ಶಯತ್ಯ-ರ್ಥಿನಾವಮ್ ॥೧॥**

ಪ್ರಶ್ನಕಾಲದಲ್ಲಿ ದೈವಜ್ಞನು ನೋಡಿದ, ಕೇಳಿದ, ವಸ್ತು, ಜೀವಜಂತು ಇತ್ಯಾದಿಗಳು ಪ್ರಚ್ಛಕನಿಗೆ ಸಂಭವಿಸುವ ಶುಭಾಶುಭಫಲ ನಿರ್ಣಯಕ್ಕೆ ಸಹಾ ಯಕ ಆಗಿರುತ್ತದೆ. ಇವುಗಳು ಪೂರ್ವಾದಿ ಯಾವದಿಕ್ಕಿನಲ್ಲಿ ಕಂಡು ಬರುತ್ತವೆ, ಅಥವಾ ಪ್ರಚ್ಛಕನು ತನ್ನೊಂದಿಗೆ ತಂದ ವಸ್ತು ಇತ್ಯಾದಿಗಳೊಂದಿಗೆ ಯಾವ ದಿಕ್ಕಿನಲ್ಲಿ ಯಾವಸ್ಥಳದಲ್ಲಿ ನಿಂತಿರುತ್ತಾನೋ ಅಥವಾ ಕುಳಿತಿರುತ್ತಾನೋ ಮತ್ತು ಯಾವತರದ ಚೇಷ್ಟೆಗಳನ್ನು ತನ್ನ ಅಂಗಾಂಗಗಳಿಂದ ಮಾಡುತ್ತಾನೋ ಎಂದು ಬುದ್ಧಿವಂತನಾದ ದೈವಜ್ಞನು ವೀಕ್ಷಿಸಬೇಕು. ಅನಂತರ ಪ್ರಚ್ಛಕನು ಪ್ರಶ್ನೆಕೇಳುವ ಕಾಲದಲ್ಲಿ ಮಾಡುವ ಚೇಷ್ಟೆಗಳು, ಅಂದರೆ ತನ್ನ ಅಂಗಸ್ಪರ್ಶನ, ಯಾವುದಾದರು ಅವಯವಗಳನ್ನು ಅಲ್ಲಾಡಿಸುವುದು, ಮಾತಾಡುವುದು, ಸಂಭಾಷಣೆ ಮಾಡು ವುದು ಇತ್ಯಾದಿ ಸಕಲ ವಿಚಾರಗಳನ್ನು ಕೂಡಾ ತಿಳಿಯಬೇಕು. ದೈವ ಪ್ರೇರಣೆ ಯಿಂದ ಈ ಚರಾಚರಾತ್ಮಕ ಕಾಲಜ್ಞಾನದಿಂದ ಪ್ರಚ್ಛಕನ ಸಂಭಾಷಣೆ, ಅಂಗಾಂಗ ಚೇಷ್ಟೆ ಇತ್ಯಾದಿಗಳನ್ನು ಆಧರಿಸಿ ದೈವಜ್ಞನು ಶುಭಾಶುಭಫಲಗಳನ್ನು ನಿರ್ಣ ಯಿಸಬೇಕು.

ಸ್ಥಾನಂ ಪುಷ್ಪಸುಹಾಸಿಭೂರಿಫಲಭೃತ್ಸುಸ್ನಿಗ್ಧಕೃತ್ತಿಚ್ಛದಾಸತ್ಪಕ್ಷಿ-
ಚ್ಯುತ ಶಸ್ತಸಂಜ್ಞಿತತರು ಚ್ಛಾಯೋಪಗೂಢಂ ಸಮಮ್ ।
ದೇವರ್ಷಿದ್ವಿಜಸಾಧುಸಿದ್ಧನಿಲಯಂ ಸತ್ಪುಷ್ಪಸಸ್ಯೋಕ್ಷಿತಂ ಸತ್ಸ್ವ-
ದೂದಕ ನಿರ್ಮಲತ್ವಜನಿತಾಹ್ಲಾದಂ ಚ ಸಚ್ಛಾದ್ವಲಮ್ ॥೨॥

ಪ್ರಶ್ನೆಹೇಳಲು ಉಪಯುಕ್ತ ಭೂಮಿಯ ಲಕ್ಷಣ ಹೇಳುತ್ತಾನೆ:-ದೈವಜ್ಞನು ಪ್ರಶ್ನೆಹೇಳಲು ಕುಳಿತುಕೊಳ್ಳುವ ಭೂಮಿಯು ಏರು-ತಗ್ಗು ಇಲ್ಲದೆ ಸಮತಟ್ಟಾದ ನೆಲಉಳ್ಳದ್ದು ಆಗಿರಬೇಕು. ಅಂಥಹ ಭೂಮಿಯಲ್ಲಿ ಮರದ ನೆರಳಿನಲ್ಲಿ ಮರಗಳಲ್ಲಿ ಹಣ್ಣುಗಳು, ಕೊಂಬೆ, ಪುಷ್ಪಗಳಿಂದ ಶೋಭಿಸಲ್ಪಟ್ಟ ಎಲೆಉಳ್ಳದ್ದಾಗಿ, ಆ ಮರಗಳಲ್ಲಿ ಅಪಶಕುನ ಸೂಚಿಸುವ ಪಕ್ಕಿಗಳು ಇಲ್ಲದೆ, ಪ್ರಶಸ್ತ ಮರ ಆಗಿರಬೇಕು. ದೇವತೆಗಳ, ಋಷಿ-ಮುನಿಗಳ, ಬ್ರಾಹ್ಮಣರ, ಸಾಧು-ಸಜ್ಜನರ ಅಥವಾ ಸಿದ್ಧಪುರುಷರ ಹೆಸರುಳ್ಳ ಸ್ಥಾನ ಆಗಿರಬೇಕು. ಪರಿಮಳ ಉಳ್ಳ ಪುಷ್ಪ, ಧಾನ್ಯಾದಿ ಉಳ್ಳ ಸಸ್ಯದಿಂದ ಕೂಡಿ ಅಲ್ಹಾದಕರಸ್ಥಳ ಆಗಿರಬೇಕು. ನಿರ್ಮಲ ನೀರು ಉಳ್ಳ ಮತ್ತು ಗರಿಕೆಹುಲ್ಲಿನಿಂದ ಆವೃತವಾದ ಭೂಮಿಯು ಪ್ರಶ್ನೆ ಹೇಳಲು ದೈವಜ್ಞನು ಉಪಯೋಗಿಸಬೇಕು.

ಛಿನ್ನಭಿನ್ನಕೃಮಿಖಾತಕಣ್ಟಕಿಪ್ಲುಷ್ಟರೂಕ್ಷಕುಟಿಲೈರ್ನ ಸತ್ಕುಜೈಃ ।
ಕ್ರೂರಪಕ್ಷಿಯುತನಿಂದ್ಯನಾಮಭಿಃ ಶುಷ್ಕಶೀರ್ಣಬಹುಪರ್ಣ-
ಚರ್ಮಭಿಃ ॥೩॥

ಪ್ರಶ್ನೆಹೇಳಲು ತ್ಯಾಜ್ಯ ಅಶುಭ ಭೂಮಿ ಲಕ್ಷಣಗಳು:-ಮರಕಡಿದ ಸ್ಥಳ, ಅಥವಾ ತುಂಡಾದ ಮರ ಉಳ್ಳ, ಕ್ರಿಮಿಕೀಟಗಳಿಂದ, ಹುಳಹಿಡಿದ ಮರಉಳ್ಳ ಸ್ಥಳ, ಮುಳ್ಳುಗಳು, ಬೆಂಕಿಯಿಂದ ಸುಡಲ್ಪಟ್ಟ ಮರ, ಒಣಗಿದ ಮರ, ಅಂಕು ಡೊಂಕಾದ ಮರ ಉಳ್ಳಸ್ಥಳ, ಪ್ರಶ್ನೆಹೇಳಲು ಅಶುಭ ಸ್ಥಳ ಆಗಿರುತ್ತದೆ. ಕ್ರೂರ ಅಥವಾ ಅಶುಭ ಸೂಚಕ (ಬಕ, ಹದ್ದು ಇತ್ಯಾದಿ) ಪಕ್ಷಿಗಳು ವಾಸಿಸುವ ಸ್ಥಳ ನಿಂದನೀಯ ಹೆಸರುಳ್ಳ ಸ್ಥಳ ಮತ್ತು ಶುಷ್ಕ ಅಥವಾ ನಿರಸ ಮರಉಳ್ಳ, ಎಲೆ, ಕೊಂಬೆ, ತೊಗಟೆ ಇತ್ಯಾದಿ ಬಿದ್ದು ಹೋದ ಮರಉಳ್ಳ ಸ್ಥಳವು ಪ್ರಶ್ನೆ ಹೇಳಲು ಅಶುಭ ಸ್ಥಳ ಆಗಿರುತ್ತದೆ.

ಶ್ಮಶಾನಶೂನ್ಯಾಯತನಂ ಚತುಷ್ಪಥಂ ತಥಾsಮನೋಜ್ಞಂ ವಿಷ-
ಮಂ ಸದೋಷರಮ್ । ಅವಸ್ಕರಾಙ್ಗಾರಕಪಾಲಭಸ್ಮಚಿಹ್ನಿತಂ
ತುಷೈಃ ಶುಷ್ಕತೃಣೈರ್ನ ಶೋಭನಮ್ ॥೪॥

ಶ್ಮಶಾನ ಭೂಮಿ, ಹಾಳಾದ ಅಥವಾ ಬಿದ್ದಗುಡಿ ಪ್ರದೇಶ, ನಾಲ್ಕು ಮಾರ್ಗಗಳು ಕೂಡುವ ಸ್ಥಳ, ಮನಸ್ಸಿಗೆ ಅಹಿತಕರವಾದ ಸ್ಥಳ, ಏರು-ತಗ್ಗಾಗಿರುವ ಸ್ಥಳ, ಕೊಳಕು ಪ್ರದೇಶ, ಅನುಪಯುಕ್ತ ವಸ್ತುಗಳು ಉಳ್ಳಸ್ಥಳ, ಬೆಂಕಿಯಿಂದ ಸುಡಲ್ಪಟ್ಟ ಕಟ್ಟಿಗೆ, ಇದ್ದಲು, ಬೂದಿ ಇತ್ಯಾದಿ ಉಳ್ಳಸ್ಥಳ, ತಲೆಬುರುಡೆ, ಎಲುಬು, ಹೊಟ್ಟು, ಭಸ್ಮ, ಒಣಗಿದ ಹುಲ್ಲು ಇತ್ಯಾದಿ ಇರುವ ಸ್ಥಳವು ಪ್ರಶ್ನೆ ಹೇಳಲು ಅಶುಭ ಭೂಮಿ ಆಗಿರುತ್ತದೆ.

**ಪ್ರವ್ರಜಿತನಗ್ನನಾಪಿತರಿಪುಬಂಧನಸೌನಿಕೈಸ್ತಥಾ ಶ್ವಪಚೈಃ । ಕಿತವಯತಿಪೀಡಿತೈರ್ಯುತ ಮಾಯುಧಮಾಧ್ವೀಕ ವಿಕ್ರಯೈರ್ನ ಶುಭಮ್ ॥೫॥**

ಸನ್ಯಾಸಿ, ಬೈರಾಗಿ, ನಗ್ನರು, ಕ್ಷೌರಿಕ, ಶತ್ರುಗಳು, ಕಟುಕರು, ಜೈಲು, ಜೂಜಾಡುವ ಸ್ಥಳ, ಪರ್ಣಶಾಲೆ, ರೋಗಿಗಳಿರುವ ಸ್ಥಳ, ಆಯುಧ ಸಂಗ್ರಹ ಉಳ್ಳಸ್ಥಳ, ಜೇನುಮಾರುವಸ್ಥಳ ಇವು ಪ್ರಶ್ನೆ ಹೇಳಲು ಅಶುಭಸ್ಥಳ ಆಗಿರುತ್ತದೆ.

**ಪ್ರಾಗುತ್ತರೇಶಾಶ್ಚ ದಿಶಃ ಪ್ರಶಸ್ತಾಃ ಪೃಷ್ಟುರ್ನ ವಾಯ್ವಂಬುಯಮಾಗ್ನಿರಕ್ಷಃ । ಪೂರ್ವಾಹ್ನಕಾಲೇಽಸ್ತಿ ಶುಭಂ ನ ರಾತ್ರೌ ಸಂಧ್ಯಾದ್ವಯೇ ಪ್ರಶ್ನಕೃತೋಽಪರಾಹ್ನೇ ॥೬॥**

ಪ್ರಶ್ನೆ ಹೇಳಲು ನಿಲ್ಲುವ ದಿಕ್ಕು ಮತ್ತು ಕಾಲಃ-ಪೂರ್ವ, ಉತ್ತರ ಮತ್ತು ಈಶಾನ್ಯ ದಿಕ್ಕು ಪ್ರಶ್ನೆ ಕೇಳುವವನಿಗೆ ಪ್ರಶಸ್ತ ದಿಕ್ಕುಗಳು ಆಗಿರುತ್ತವೆ. ಆದ್ದರಿಂದ ಪ್ರಚ್ಛಕನು ಈ ದಿಕ್ಕುಗಳಿಗೆ (ಪೂರ್ವ, ಉತ್ತರ ಮತ್ತು ಈಶಾನ್ಯ) ಅಭಿಮುಖವಾಗಿ ಪ್ರಶ್ನೆ ಕೇಳಬೇಕು. ಇದು ಉತ್ತಮ. ಉಳಿದ ದಿಕ್ಕುಗಳಾದ ವಾಯುವ್ಯ, ದಕ್ಷಿಣ, ಆಗ್ನೇಯ, ನೈಋತ್ಯ ಅಥವಾ ಪಶ್ಚಿಮ ದಿಕ್ಕಿಗೆ ಅಭಿಮುಖನಾಗಿ ಪ್ರಶ್ನೆ ಕೇಳುವುದು ಅಶುಭಫಲ ಸೂಚಕ ಆಗಿರುತ್ತದೆ. ಪೂರ್ವಾಹ್ನಕಾಲದಲ್ಲಿ ಪ್ರಶ್ನೆ ಕೇಳಿದರೆ ಪ್ರಚ್ಛಕನಿಗೆ ಶುಭಫಲ ಲಭಿಸುತ್ತದೆ. ರಾತ್ರಿಕಾಲ, ಪೂರ್ವಸಂಧ್ಯಾಕಾಲ, ಸಾಯಂಸಂಧ್ಯಾಕಾಲ ಮತ್ತು ಸಾಯಂಕಾಲ ಪ್ರಶ್ನೆ ಕೇಳುವುದು ಪ್ರಚ್ಛಕನಿಗೆ ಅಶುಭ ಫಲಸೂಚಕ ಆಗಿರುತ್ತದೆ.

**ವೇಲಾಃ ಸರ್ವಾಃ ಪ್ರಶಸ್ಯಂತೇ ಪೂರ್ವಾಹ್ನೇ ಪರಿಪೃಚ್ಛತಾಮ್ । ಸಂಧ್ಯಯೋರಪರಾಹ್ನೇ ತು ಕ್ಷಪಾಯಾಂ ತು ವಿಗರ್ಹಿತಾಃ॥ಇತಿ॥**

ಪ್ರಶ್ನೆಕೇಳಲು ಪೂರ್ವಾಹ್ನಕಾಲ ಶ್ರೇಷ್ಠ ಆಗಿರುತ್ತದೆ. ಸಂಧ್ಯಾಕಾಲ, ಅಪರಾಹ್ನ, ರಾತ್ರಿಕಾಲ ಪ್ರಶ್ನೆಕೇಳಲು ನಿಂದಿತಕಾಲ ಆಗಿರುತ್ತದೆ.

**ಯಾತ್ರಾವಿಧಾನೇ ಹಿ ಶುಭಾಶುಭಂ ಯತ್ ಪ್ರೋಕ್ತಂ ನಿಮಿತ್ತಂ ತದಿಹಾಪಿ ವಾಚ್ಯಮ್ । ದೃಷ್ಟ್ವಾ ಪುರೋ ವಾ ಜನತಾಹೃತಂ ವಾ ಪೃಷ್ಟುಃ ಸ್ಥಿತಂ ಪಾಣಿತಲೇಽಥ ವಸ್ತ್ರೇ ॥೭॥**

ಪ್ರಯಾಣಕಾಲದಲ್ಲಿ ಕಂಡು ಬರುವ ಶುಭಾಶುಭ ಶಕುನಗಳು ಕೂಡಾ ಪ್ರಶ್ನಕಾಲದಲ್ಲಿ ಕಂಡು ಬಂದರೆ ಅವುಗಳ ಫಲಗಳನ್ನು ಕೂಡಾ ಚಿಂತಿಸಬೇಕು. ಪ್ರಚ್ಛಕನು ತನ್ನೊಂದಿಗೆ ತಂದ ವಸ್ತುಗಳನ್ನು ಅಥವಾ ಆ ಕಾಲದಲ್ಲಿ ಅಲ್ಲಿ ಬಂದ ವರ ಕೈಯಲ್ಲಿರುವ ವಸ್ತುಗಳು, ಅವರು ಉಟ್ಟ ವಸ್ತ್ರದಲ್ಲಿರುವ ಚಿಹ್ನೆ ಇತ್ಯಾದಿಗಳನ್ನು ತಿಳಿದು ಪ್ರಶ್ನೆಯ ಫಲಾಫಲಗಳನ್ನು ದೈವಜ್ಞನು ಊಹಿಸಬೇಕು.

**ಅಥಾಙ್ಗಾನ್ಯೂರ್ವೋಷ್ಠಸ್ತನವೃಷಣಪಾದಂ ಚ ದಶನಾ ಭುಜೌ ಹಸ್ತೌ ಗಂಡೌ ಕಚಗಲನಖಾಙ್ಗುಷ್ಠಮಪಿ ಯತ್ । ಸಶಂಖಮ್ ಕಕ್ಷಾಂಸಂ ಶ್ರವಣಗುದಸಂಧೀತಿ ಪುರುಷೇ**

**ಪುರುಷ ಸಂಜ್ಞಕ ಅಂಗಗಳು:**-ತೊಡೆಗಳು, ತುಟಿಗಳು, ಸ್ತನ, ವೃಷಣ, ಕಾಲು, ಹಲ್ಲು, ಭುಜ, ಕೈಗಳು, ಗಲ್ಲ, ಕೂದಲು, ಗಂಟಲು, ಉಗುರು, ಅಂಗುಷ್ಠ (ಕೈ ಮತ್ತು ಕಾಲಿನ ಹೆಬ್ಬೆಟ್ಟು), ಕಂಕುಳ, ಬಾಹು, ಕಿವಿ, ಗುದ ಮತ್ತು ಸಕಲ ಅಂಗಾಗ ಸಂಧಿಗಳು ಪುರುಷ ಸಂಜ್ಞಕ ಅಂಗಗಳು ಆಗಿರುತ್ತವೆ.

**ಸ್ತ್ರಿಯಾಂ ಭ್ರೂನಾಸಾಸ್ಫಿಗ್ವಲಿಕಟಿಸುಲೇಖಾಙ್ಗುಲಿಚಯಮ್ ॥೮॥ ಜಿಹ್ವಾ ಗ್ರೀವಾ ಪಿಣ್ಡಿಕೇ ಪಾರ್ಷ್ಣಿಯುಗ್ಮಂ ಜಂಘೇ ನಾಭಿಃ ಕರ್ಣಪಾಲೀ ಕೃಕಾಟೀ ।**

**ಸ್ತ್ರಿ ಸಂಜ್ಞಕ ಅಂಗಗಳು:**-ಹುಬ್ಬು, ಮೂಗು, ಸೊಂಟದ ಹಿಂಭಾಗಹೊಟ್ಟೆಯ ನೆರಿ, ಸೊಂಟ, ಅಂಗೈರೇಖೆಗಳು, ಬೆರಳುಗಳು, ನಾಲಗೆ, ಕುತ್ತಿಗೆ, ತೊಡೆಯ ಹಿಂಬದಿ, ಹಿಮ್ಮಡಿ, ಕಣಕಾಲಿನ ಹಿಂಭಾಗ, ನಾಭಿ, ಕಿವಿಯ ತೂತು, ಕುತ್ತಿಗೆಯ ಹಿಂದಿನಭಾಗ ಇವುಗಳು ಸ್ತ್ರೀ ಸಂಜ್ಞಕ ಅಂಗಗಳು ಆಗಿರುತ್ತವೆ.

**ವಕ್ತ್ರಂ ಪೃಷ್ಠಂ ಜತ್ರುಜಾನ್ವಸ್ಥಿಪಾರ್ಶ್ವಂ ಹೃತ್ತಾಲ್ವಕ್ಷೀ ಮೇಹನೋರಸ್ತ್ರಿಕಂ ಚ ॥೯॥ ನಪುಂಸಕಾಖ್ಯಂ ಚ ಶಿರೋ ಲಲಾಟ**

**ಘೂಶ್ಯಾದ್ಯಸಂಜ್ಞೈರಪರೈಶ್ಚಿರೇಣ । ಸಿದ್ಧಿರ್ಭವೇಜ್ಞಾತು ನಪುಂಸ-ಕೈರ್ನೋ ರೂಕ್ಷ್ಮಕ್ಷತೈರ್ಭಗ್ನಕೃಶೈಶ್ಚ ಪೂರ್ವೈಃ ॥೧೦॥**

**ನಪುಂಸಕ ಸಂಜ್ಞಕ ಅಂಗಗಳು:**-ಮುಖ, ಜಿಸ್ನು, ಕುತ್ತಿಗೆಯ ಕೆಳಗಿನ ಎಲುಬು, ಮೊಣಗಂಟು, ಪಾರ್ಶ್ವಗಳು, ಹೃದಯ, ಕಿರುನಾಲಿಗೆ, ಕಣ್ಣು, ಲಿಂಗ, ಎದೆ, ಬೆನ್ನೆಲುಬಿನ ತುದಿಭಾಗ, ತಲೆ ಮತ್ತು ಹಣೆ, ಈ ಅಂಗಗಳು ನಪುಂಸಕ ಅಂಗಗಳು ಆಗಿರುತ್ತವೆ.

1. ಪ್ರಚ್ಛಕನು ಪುರುಷ ಸಂಜ್ಞಕ ಅಂಗಗಳನ್ನು ಮುಟ್ಟಿದರೆ ಅವನ ಚಿಂತಿತ ಕಾರ್ಯವು ಕೂಡಲೇ ಸಿದ್ಧಿಸುತ್ತದೆ. 2. ಸ್ತ್ರೀ ಸಂಜ್ಞಕ ಅಂಗಗಳನ್ನು ಮುಟ್ಟಿದರೆ ಪ್ರಚ್ಛಕನ ಚಿಂತಿತ ಕಾರ್ಯವು ವಿಳಂಬದಿಂದ ಆಗುತ್ತದೆ ಎಂದು ತಿಳಿಯಬೇಕು. 3. ನಪುಂಸಕ ಸಂಜ್ಞಕ ಅಂಗಗಳನ್ನು ಪ್ರಚ್ಛಕನು ಮುಟ್ಟಿದರೆ ಅವನ ಚಿಂತಿತ ಕಾರ್ಯವು ಫಲಿಸುವುದಿಲ್ಲ ಎಂದು ತಿಳಿಯಬೇಕು. 4. ಮೊದಲು ಹೇಳಿದ ಪುರುಷ ಮತ್ತು ಸ್ತ್ರೀ ಸಂಜ್ಞಕ ಅಂಗಗಳು, ದರಗುಗಿರುವುದು ಅಥವಾ ಒಣಗಿದಂತೆ ಇರುವುದು, ಪೆಟ್ಟು ಅಥವಾ ಘಾಯ ಉಳ್ಳ ಅಂಗಾಂಗ, ತುಂಡಾಗಿರುವುದು ಕಂಡು ಬಂದರೆ ಪ್ರಚ್ಛಕನ ಚಿಂತಿತಕಾರ್ಯ ಕೈಗೂಡುವುದಿಲ್ಲ ಎಂದು ತಿಳಿಯಬೇಕು.

**ಪುಂಸಂಜ್ಞೇಷ್ವಾಸು ಸಿದ್ಧಿಃಸ್ಯಾತ್ ಸ್ತ್ರೀಸಂಜ್ಞೇಷು ಚಿರಾದ್ಭವೇತ್। ಅಶುಭಂ ತ್ವೇವ ನಿರ್ದಿಷ್ಟಂ ನಪುಂಸಕಸನಾಮಸು ॥ ಪುರುಷಾಖ್ಯೇ ನೃಸಂಸ್ಪೃಷ್ಟೇ ಬಾಹ್ಯೇ ರೂಕ್ಷೇಽಬಲೇಕ್ಷತೇ । ನಾರ್ಥಸಿದ್ಧಿ. ಮತೋ ಬ್ರೂಯಾದಙ್ಗ ವಿದ್ಯಾವಿಶಾರದಃ ॥ಇತಿ॥**

**ಪರಾಶರಮತ:**-ಪುರುಷ ಸಂಜ್ಞಕ ಅಂಗಗಳನ್ನು ಪ್ರಚ್ಛಕನು ಪ್ರಶ್ನಕಾಲದಲ್ಲಿ ಮುಟ್ಟಿದರೆ ಆತನ ಕಾರ್ಯಸಿದ್ಧಿಯನ್ನು ಸೂಚಿಸುತ್ತದೆ. ಸ್ತ್ರೀಸಂಜ್ಞಕ ಅಂಗಗಳನ್ನು ಮುಟ್ಟಿದರೆ ವಿಳಂಬದಿಂದ ಕಾರ್ಯಸಿದ್ಧಿಯನ್ನು ಸೂಚಿಸುತ್ತದೆ. ನಪುಂಸಕ ಸಂಜ್ಞಕ ಅಂಗಗಳು ಅಶುಭ ಹಾಗೂ ಕಾರ್ಯಹಾನಿಯನ್ನು ಸೂಚಿಸುತ್ತದೆ. ಪುರುಷಾದಿ ಸಂಜ್ಞಕ ಅಂಗಗಳು ಒಣಗಿದ್ದರೆ ಅಥವಾ ಘಾಯಗೊಂಡಿದ್ದರೆ ಕಾರ್ಯಹಾನಿ ಸೂಚಿಸುತ್ತದೆ. ಇದು ಅಂಗವಿದ್ಯಾ ಪಂಡಿತರ ಮತ ಆಗಿರುತ್ತದೆ.

**ಸ್ಪೃಷ್ಟೇ ವಾ ಚಾಲಿತೇ ವಾಪಿ ಪಾದಾಙ್ಗುಷ್ಠೇಽಕ್ಷಿರುಗ್ಭವೇತ್ ।
ಅಂಙ್ಗುಲ್ಯಾಂ ದುಹಿತುಃ ಶೋಕಂ ಶಿರೋಘಾತೇ ನೃಪಾದ್
ಭಯಮ್ ॥೧೧॥**

1. ಪ್ರಚ್ಛಕನು ತನ್ನ ಕಾಲಿನ ಹೆಬ್ಬೆಟ್ಟನ್ನು ಮುಟ್ಟಿದರೆ ಅಥವಾ ಅಲ್ಲಾಡಿಸಿದರೆ ಆತನಿಗೆ ಕಣ್ಣಿನ ರೋಗ ಸಂಭವಿಸುತ್ತದೆ ಎಂದು ಹೇಳಬೇಕು. 2. ಪ್ರಚ್ಛಕನು ಬೆರಳುಗಳನ್ನು ಮುಟ್ಟಿದರೆ ಆತನ ಮಗಳಿಗೆ ದುಃಖ ಸಂಭವಿಸುತ್ತದೆ ಎಂದು ಹೇಳಬೇಕು. 3. ಪ್ರಚ್ಛಕನ ತಲೆಗೆ ಪೆಟ್ಟಾದರೆ ಆತನಿಗೆ ರಾಜರಿಂದ ತೊಂದರೆಯು ಸಂಭವಿಸಿದೆ ಎಂದು ಹೇಳಬೇಕು.

**ವಿಪ್ರಯೋಗಮುರಸಿ ಸ್ವಗಾತ್ರತಃ ಕರ್ಪಟಾಹೃತಿರನರ್ಥದಾ ಭವೇತ್ ।
ಸ್ಯಾತ್ ಪ್ರಿಯಾಪ್ತಿರಭಿಗೃಹ್ಯ ಕರ್ಪಟಂ ಪೃಚ್ಛತಶ್ಚರಣಪಾದಯೋಃ
ಜಿತುಃ ॥೧೨॥**

1. ಪ್ರಚ್ಛಕನು ತನ್ನ ಎದೆಯನ್ನು ಮುಟ್ಟಿದರೆ ಆವನಿಗೆ ವಿಯೋಗ ಆಗುತ್ತದೆ. 2. ಪ್ರಚ್ಛಕನು ವಸ್ತ್ರವನ್ನು ಹಿಡಿದು, ತನ್ನ ಎರಡು ಕಾಲುಗಳನ್ನು ಜೋಡಿಸಿದರೆ ಆತನಿಗೆ ಪ್ರಿಯವಾದ ಅಥವಾ ಇಚ್ಛಿತ ವಸ್ತುಲಾಭ ಆಗುತ್ತದೆ.

**ಪಾದಾಙ್ಗುಷ್ಠೇನ ವಿಲಿಖೇದ್ ಭೂಮಿಂ ಕ್ಷೇತ್ರೋತ್ಥಚಿಂತಯಾ ।
ಹಸ್ತೇನ ಪಾದೌ ಕಣ್ಡೂಯೇತ್ತಸ್ಯ ದಾಸೀಮಯೀ ಚ ಸಾ ॥೧೩॥**

ಪ್ರಚ್ಛಕನು ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಕೆದರುತ್ತಿದ್ದರೆ ಆತನಿಗೆ ಭೂಮಿ ವಿಚಾರ ಚಿಂತೆ ಇದೆ ಎಂದು ತಿಳಿಯಬೇಕು. 2. ಪ್ರಚ್ಛಕನು ತನ್ನ ಕೈಯಿಂದ ಪಾದಗಳನ್ನು ಗೀರುತ್ತಿದ್ದರೆ ಆತನಿಗೆ ತನ್ನ ಕೆಲಸದವಳಿಂದ ಚಿಂತೆ ಉಂಟೆಂದು ತಿಳಿಯಬೇಕು.

**ತಾಲಭೂರ್ಜಪಟದರ್ಶನೇಂಽಶುಕಂ ಚಿಂತಯೇತ್ ಕಚತುಷಾಸ್ಥಿಭ-
ಸ್ಮಗಮ್ । ವ್ಯಾಧಿರಾಶ್ರಯತಿ ರಜ್ಜುಜಾಲಕಂ ವಲ್ಕಲಂ ಚ ಸಮ
ವೇಕ್ಷ್ಯ ಬಂಧನಮ್ ॥೧೪॥**

1. ಪ್ರಚ್ಛಕನು ತಾಳೆ ಅಥವಾ ಭೂರ್ಜ ಮರದ ಎಲೆಯನ್ನು ನೋಡುತ್ತಿದ್ದರೆ ಆತನು ಉಡುವ ವಸ್ತ್ರದ ವಿಚಾರ ಚಿಂತಿಸುತ್ತಾನೆ ಎಂದು ತಿಳಿಯಬೇಕು. 2. ಕೂದಲು, ಹೊಟ್ಟು, ಎಲುಬು, ಭಸ್ಮ ಇವುಗಳಲ್ಲಿ ಯಾವುದಾದರೂ

ಒಂದನ್ನು ಪ್ರಚ್ಛಕನು ಪ್ರಶ್ನಕಾಲದಲ್ಲಿ ಹೊಂದಿದ್ದರೆ, ಆವನು ರೋಗಪೀಡಿತನು ಎಂದು ತಿಳಿಯಬೇಕು. 3. ಹಗ್ಗ, ಬಲೆ, ತೊಗಟೆ ಇವುಗಳ ಮೇಲೆ ನಿಂತಿದ್ದರೆ ಅಥವಾ ಕೂತುಕೊಂಡಿದ್ದರೆ ಅಥವಾ ಇವುಗಳನ್ನು ಪ್ರಚ್ಛಕನು ನೋಡುತ್ತಿದ್ದರೆ ಆತನಿಗೆ ಬಂಧನ ಸಂಭವಿಸುತ್ತದೆ ಎಂದು ತಿಳಿಯಬೇಕು.

**ಪಿಪ್ಪಲೀಮರಿಚಶುಂಠಿವಾರಿದೈ ರೋಧ್ರಕುಷ್ಠವಸನಾಂಬುಜೀರಕೈಃ । ಗಂಧಮಾಂಸಿಶತಪುಷ್ಪಯಾ ವದೇತ್ ಪೃಚ್ಛತಸ್ತಗರಕೇಣ ಚಿಂತ-ಯೇತ್ ॥೧೫॥ ಸ್ತ್ರೀ ಪುರುಷ ದೋಷಪೀಡಿತಸರ್ವಾರ್ಥಸುತಾರ್ಥ-ಧಾನ್ಯತನಯಾನಾಮ್ । ದ್ವಿಚತುಷ್ಪದಕ್ಷಿತೀನಾಂ ವಿನಾಶತಃ ಕೀರ್ತಿ-ತೈರ್ದೃಷ್ಟೈಃ ॥೧೯॥**

ಪ್ರಚ್ಛಕನು ಪ್ರಶ್ನಕಾಲದಲ್ಲಿ ನೋಡುವ ದ್ರವ್ಯಗಳಿಂದ ಅವನ ಚಿಂತಿತ ವಿಚಾರ ಅಥವಾ ಅವನಿಗೆ ಸಂಭವಿಸುವ ಫಲಾಫಲಗಳನ್ನು ಕ್ರಮವಾಗಿ ಹೇಳು ತ್ತಾನೆ. 1. ಹಿಪ್ಪಲಿ-ಸ್ತ್ರೀಹೇತು ಚಿಂತೆ, 2. ಕರಿಮೆಣಸು-ಪುರುಷ ಹೇತು ಚಿಂತೆ, 3. ಶುಂಠಿ-ಸಂಕಷ್ಟದಲ್ಲಿರುವ, ರೋಗಿಯ, ಅಥವಾ ಮೃತವ್ಯಕ್ತಿಯ ಚಿಂತೆ, 4. ಮುಸ್ತಕ(ಔಷಧಿಗೆ ಉಪಯುಕ್ತ ಹುಲ್ಲು)-ಸರ್ವನಾಶ, 5. ಲೋಧ್ರ -ಧನನಾಶ, 6. ಕುಷ್ಠ (ಕುಟ-ಔಷಧಿಗೆ ಉಪಯುಕ್ತ ಪರಿಮಳ ಉಳ್ಳ ಒಂದು ಜಾತಿಯ ಗಿಡ)-ಪುತ್ರನಾಶ ಅಥವಾ ವಿಯೋಗ, 7. ವಸ್ತ್ರ-ಧನನಾಶ, 8. ಜಲ -ಧಾನ್ಯನಾಶ, 9. ಜೀರಿಗೆ-ಸಂತಾನನಾಶ, 10. ಗಂಧ ಮಾಂಸ್ಯಾ-ದ್ವಿಪದನಾಶ, 11. ಶತಪುಷ್ಪ-ಚತುಷ್ಪಾದ 12. ತಗರ-ಭೂಮಿನಾಶ ಎಂದು ತಿಳಿಯಬೇಕು.

**ನ್ಯಗ್ರೋಧಮಧುಕತಿಂದುಕಜಂಬೂಪ್ಲಕ್ಷಾಮ್ರಬದರಜಾತಿಫಲೈಃ । ಧನಕನಕಪುರುಷ ಲೋಹಾಂಶುಕರೂಪ್ಯಾದುಂಬರಾಪ್ತಿರಪಿ ಕರಗೈಃ॥**

ಪ್ರಶ್ನಕಾಲದಲ್ಲಿ ಪ್ರಚ್ಛಕನು ತನ್ನ ಕೈಯಲ್ಲಿ ಹಿಡಿದ ವಸ್ತುಗಳನ್ನು ಆಧರಿಸಿ ಅವನಿಗೆ ಸಂಭವಿಸಬಹುದಾದ ಅಥವಾ ಅವನು ಚಿಂತಿತ ವಿಚಾರಗಳನ್ನು ಕ್ರಮ ವಾಗಿ ಹೇಳುತ್ತಾನೆ. 1. ಆಲದ ಫಲ-ಧನಪ್ರಾಪ್ತಿ, 2. ಮಧುಕ(ಅಶೋಕ)ಫಲ -ಬಂಗಾರ ಪ್ರಾಪ್ತಿ, 3. ಜಾತೀಫಲ-ಪುರುಷ (ಸೇವಕರು)ಪ್ರಾಪ್ತಿ, 4. ಜಂಬು ಫಲ-ಲೋಹ ಪ್ರಾಪ್ತಿ, 5. ಪ್ಲಕ್ಷಫಲ-ವಸ್ತ್ರ ಪ್ರಾಪ್ತಿ, 6. ಮಾವಿನ ಹಣ್ಣು-ಬೆಳ್ಳಿ ಪ್ರಾಪ್ತಿ, 7. ಬೊಗರಿ ಹಣ್ಣು ಮತ್ತು ಜಾಯಿಫಲ-ತಾಮ್ರ ಪ್ರಾಪ್ತಿ ಎಂದು ತಿಳಿಯಬೇಕು.

ಧಾನ್ಯಪರಿಪೂರ್ಣಪಾತ್ರಂ ಕುಂಭಃ ಪೂರ್ಣಃ ಕುಟುಂಬವೃದ್ಧಿಕರೌ ।
ಗಜಗೋಶುನಾಂ ಪುರೀಷಂ ಧನಯುವತಿಸುಹೃದ್ವಿನಾಶಕರವ್ ॥

ಪ್ರಶ್ನಕಾಲದಲ್ಲಿ 1. ಧಾನ್ಯದಿಂದ ತುಂಬಿದ ಪಾತ್ರೆಯನ್ನು ಅಥವಾ ನೀರಿನಿಂದ ತುಂಬಿದ ಕಲಶವನ್ನು ನೋಡಿದರೆ, ಪ್ರಚ್ಛಕನ ಕುಟುಂಬವೃದ್ಧಿ ಆಗುತ್ತದೆ. 2. ಆನೆಯ ಲದ್ದಿಯನ್ನು ನೋಡಿದರೆ ಧನನಾಶ, 3. ಸೆಗಣಿ ನೋಡಿದರೆ ಸ್ತ್ರೀನಾಶ, 4. ನಾಯಿಯ ಹೇಲು ನೋಡಿದರೆ ಮಿತ್ರನಾಶ ಸಂಭವಿಸುತ್ತದೆ.

ಪಶುಹಸ್ತಿಮಹಿಷಪಂಕಜರಜತ ವ್ಯಾಘ್ರೈರ್ಲಭೇತ ಸಂದೃಷ್ಟೈಃ ।
ಅವಿಧನನಿವಸನಮಲಯಜಕೌಶೇಯಾಭರಣಸಂಘಾತಮ್ ॥೧೯॥

ಪ್ರಶ್ನಕಾಲದಲ್ಲಿ 1. ದನವನ್ನು ನೋಡಿದರೆ ಕಂಬಳಿ ಮೊದಲಾದ ಉಣ್ಣೆ ವಸ್ತ್ರಲಾಭ, 2. ಆನೆಯನ್ನು ನೋಡಿದರೆ ಧನಾಗಮ, 3. ಎಮ್ಮೆಯನ್ನು ನೋಡಿದರೆ ಉಡುಪು, 4. ಕಮಲದ ಹೂ ನೋಡಿದರೆ ಚಂದನ, 5. ಬೆಳ್ಳಿಯನ್ನು ನೋಡಿದರೆ ಸಿಲ್ಕಿನ ವಸ್ತ್ರ, 6. ಹುಲಿಯನ್ನು ನೋಡಿದರೆ ಆಭರಣ ಪ್ರಾಪ್ತಿ ಆಗುತ್ತದೆ.

ಪೃಚ್ಛಾ ವೃದ್ಧಶ್ರಾವಕಸುಪರಿವ್ರಾಡ್ದರ್ಶನೇ ನೃಭಿರ್ವಿಹಿತಾ ।
ಮಿತ್ರದ್ಯೂತಾರ್ಥಭವಾ ಗಣಿಕಾನೃಪಸೂತಿಕಾರ್ಥಕೃತಾ ॥೨೦॥

ಪ್ರಚ್ಛಕನು 1. ವೃದ್ಧಕಾಪಾಲಿಕ ಸನ್ಯಾಸಿಯನ್ನು ನೋಡಿದರೆ, ಅವನ ಚಿಂತಿತ ವಿಚಾರ ಅಥವಾ ಪ್ರಶ್ನೆಯು ಮಿತ್ರ ವಿಚಾರ ಅಥವಾ ಜೂಜಿನ ವಿಚಾರ ಆಗಿರುತ್ತದೆ. 2. ಸನ್ಯಾಸಿಯನ್ನು ನೋಡಿದರೆ ವೇಶ್ಯೆಯ ವಿಚಾರ, ರಾಜನ ವಿಚಾರ ಅಥವಾ ಹೆರಿಗೆಯಾದ ಹೆಂಗಸಿನ ವಿಚಾರ ಎಂದು ತಿಳಿಯಬೇಕು.

ಶಾಕ್ಯೋಪಾಧ್ಯಾಯಾರ್ಹನ್ನಿರ್ಗ್ರಂಥಿ ನಿಮಿತ್ತನಿಗಮಕೈವರ್ತೈಃ ।
ಚೌರಚಮೂಪತಿವಣಿಜಾಂ ದಾಸೀಯೋಧಾಪಣಸ್ಥವಧ್ಯಾನಾಮ್॥

ಪ್ರಚ್ಛಕನು 1. ಶಾಕ್ಯಾದಿಪಂಥದ ಸನ್ಯಾಸಿಯನ್ನು ನೋಡಿದರೆ ಅವನ ಪ್ರಶ್ನೆ ಅಥವಾ ಚಿಂತಿತ ವಿಚಾರವು ಕಳ್ಳನನ್ನು ಕುರಿತು ಆಗಿರುತ್ತದೆ. 2. ಶಿಕ್ಷಕನನ್ನು ನೋಡಿದರೆ ಸೇನಾಪತಿ ವಿಚಾರ, 3. ಅರ್ಹ ಪಂಥದ ಸನ್ಯಾಸಿಯನ್ನು

ನೋಡಿದರೆ ವ್ಯಾಪಾರ ವಿಚಾರ, 4. ನಿಗ್ರಂಥ ಪಂಥದ (ನಗ್ನ ಸಂನ್ಯಾಸಿ) ವನನ್ನು ನೋಡಿದರೆ ದಾಸೀ ವಿಚಾರ. 5. ನಿಮಿತ್ತ ಶಾಸ್ತ್ರ ಲಕ್ಷಣಗಳನ್ನು ಹೇಳುವವನನ್ನು ನೋಡಿದರೆ ಯೋಧ ಅಥವಾ ಸೈನಿಕ ವಿಚಾರ ಎಂದು, 6. ವ್ಯಾಪಾರಿಯನ್ನು ಕಂಡರೆ ವ್ಯಾಪಾರ ಮಾಡುವವನ ವಿಚಾರ, ಅಂಬಿಗನನ್ನು ನೋಡಿದರೆ ಕೊಲೆ ಮಾಡಿದವ ಅಥವಾ ಕಟುಕನ ವಿಚಾರ ಎಂದು ತಿಳಿಯಬೇಕು.

**ತಾಪಸೇ ಶೌಣ್ಡಿಕೇ ದೃಷ್ಟೇ ಪ್ರೋಷಿತಂ ಪಶುಪಾಲನಮ್ ।**
**ಹೃದ್ಗತಂ ಪ್ರಚ್ಛಕಸ್ಯ ಸ್ಯಾದುಂಛವೃತ್ತೌ ವಿಪನ್ನತಾ ॥೨೨॥**

ಪ್ರಚ್ಛಕನು 1. ದುಷ್ಟವ್ಯಕ್ತಿಯನ್ನು ನೋಡಿದರೆ ಅವನು ಚಿಂತಿತ ವಿಚಾರ ಅಥವಾ ಪ್ರಶ್ನೆಯು ಪರದೇಶ ಸಂಚರಿಸುವ ವ್ಯಕ್ತಿ ವಿಚಾರ ಎಂದು, 2. ಮದ್ಯ ಮಾರುವವನನ್ನು ನೋಡಿದರೆ ಪಶುಪಾಲನೆ ವಿಚಾರ, 3. ನೆಲದಲ್ಲಿ ಬಿದ್ದಿರುವ ಕಾಳು ಇತ್ಯಾದಿ ಹೆಕ್ಕುವವನನ್ನು ನೋಡಿದರೆ ಸಂಕಷ್ಟದಲ್ಲಿ ಸಿಲುಕಿದವನ ವಿಚಾರ ಚಿಂತೆ ಎಂದು ತಿಳಿಯಬೇಕು.

**ಇಚ್ಛಾಮಿ ಪ್ರಷ್ಟುಂ ಭಣ ಪಶ್ಯತ್ವಾರ್ಯಃ ಸಮಾದಿಶೇತ್ಯುಕ್ತೇ ।**
**ಸಂಯೋಗ ಕುಟುಂಬೋತ್ಥಾ ಲಾಭೈಶ್ವರ್ಯೋದ್ ಗತಾ ಚಿಂತಾ॥**

ಪ್ರಚ್ಛಕನು ಪ್ರಶ್ನಕಾಲದಲ್ಲಿ 1. "ಇಚ್ಛಿಸುತ್ತೇನೆ" ಎಂದು ಹೇಳಿದರೆ ಅವನ ಚಿಂತಿತ ವಿಚಾರವು ಕುಟುಂಬ ಸಂಬಂಧ ಆಗಿರುತ್ತದೆ. 2. "ನೋಡಿ ಪೂಜ್ಯರೇ" ಎಂದರೆ ಚಿಂತಿತ ವಿಚಾರವು ಲಾಭಪ್ರಾಪ್ತಿಗೆ ಸಂಬಂಧ ಪಟ್ಟದಾಗಿ ರುತ್ತದೆ. 3. "ಹೇಳಿರಿ" ಎಂದರೆ ಚಿಂತಿತ ವಿಚಾರವು ಐಶ್ವರ್ಯಕ್ಕೆ ಸಂಬಂಧ ಪಟ್ಟದ್ದು ಆಗಿರುತ್ತದೆ.

**ನಿರ್ದಿಶೇತಿ ಗದಿತೇ ಜಯಾಧ್ವಜಾ ಪ್ರತ್ಯವೇಕ್ಷ್ಯ ಮಮ ಚಿಂತಿತಂ ವದ । ಆಶು ಸರ್ವಜನಮಧ್ಯಗಂ ತ್ವಯಾ ದೃಶ್ಯತಾಮಿತಿ ಚ ಬಂಧುಚೌರಜಾ ॥೨೪॥**

ಪ್ರಚ್ಛಕನು ದೈವಜ್ಞನ ಹತ್ತಿರ 1. "ಭವಿಷ್ಯ ಹೇಳು" ಎಂದರೆ ಅವನ ಚಿಂತಿತ ವಿಚಾರವು ಜಯಪ್ರಾಪ್ತಿ ಅಥವಾ ಪ್ರಯಾಣಕ್ಕೆ ಸಂಬಂಧಪಟ್ಟದ್ದಾಗಿರುತ್ತದೆ. 2. "ಆಲೋಚಿಸಿ ಚಿಂತಿತ ವಿಚಾರ ಹೇಳಿರಿ" ಎಂದರೆ ಅವನ ಚಿಂತಿತ ವಿಚಾರವು ಬಂಧು–ಬಾಂಧವರಿಗೆ ಸಂಬಂಧಪಟ್ಟದ್ದು, 3. "ಬೇಗನೆ ಶೋಧಿಸಿ" ಎಂದರೆ ಅವನು ಚಿಂತಿತ ವಿಚಾರವು ಕಳ್ಳನಿಗೆ ಸಂಬಂಧಪಟ್ಟದ್ದಾಗಿರುತ್ತದೆ.

ಅಂತಃಸ್ಥೇಽಂಗೇ ಸ್ವಜನ ಉದಿತೋ ಬಾಹ್ಯಜೇ ಬಾಹ್ಯ ಏವ
ಪಾದಾಙ್ಗುಷ್ಠಾಙ್ಗುಲಿಕಲನಯಾ ದಾಸದಾಸೀಜನಃ ಸ್ಯಾತ್ ।
ಜಂಘೇಪ್ರೇಷ್ಯೋ ಭವತಿ ಭಗಿನೀ ನಾಭಿತೋ ಹೃತ್ಸ್ತು ಭಾರ್ಯಾ
ಪಾಣ್ಯಙ್ಗುಷ್ಠಾಙ್ಗುಲಿಚಯಕೃತಸ್ಪರ್ಶನೇ ಪುತ್ರಕನ್ಯೇ ॥೨೫॥

**ಚೋರಪ್ರಶ್ನೆ-ಕಳ್ಳನ ವಿಚಾರಃ**-ಪ್ರಚ್ಛಕನು ತನ್ನ ದೇಹದ ಒಳಗಿನ ಅಂಗಗಳನ್ನು ಪ್ರಶ್ನಕಾಲದಲ್ಲಿ ಮುಟ್ಟಿದರೆ ಆತನ ಸಂಬಂಧಿಕನೇ ಕಳ್ಳನೆಂದು ತಿಳಿಯಬೇಕು. 2. ಆತನು ಬಾಹ್ಯ ಅಂಗಗಳನ್ನು ಮುಟ್ಟಿದರೆ ಕಳ್ಳನು ಅವನಿಗೆ ಸಂಬಂಧವಿಲ್ಲದ ಅಪರಿಚಿತನು. 3. ಆತನು ಕಾಲಿನ ಹೆಬ್ಬೆಟ್ಟನ್ನು ಮುಟ್ಟಿದರೆ ಅವನ ಸೇವಕನೇ ಕಳ್ಳನು. 4. ಆತನು ಕಾಲಿನ ಬೆರಳನ್ನು ಮುಟ್ಟಿದರೆ ಆತನ ಕೆಲಸದ ಹೆಂಗಸು ಕಳ್ಳತನ ಮಾಡಿದವಳು. 5. ಆತನು ತೊಡೆಯನ್ನು ಮುಟ್ಟಿದರೆ ಕಳ್ಳನು ಆತನ ಕೆಲಸದ ಆಳು, 6. ಆತನು ನಾಭಿಯನ್ನು ಮುಟ್ಟಿದರೆ ಆತನ ತಂಗಿಯು ಕಳ್ಳತನ ಮಾಡಿದವಳು. 7. ಆತನು ತನ್ನ ಹೃದಯವನ್ನು ಮುಟ್ಟಿದರೆ ಕಳ್ಳತನ ಮಾಡಿದವಳು ಆತನ ಹೆಂಡತಿ ಎಂದು. 8. ತನ್ನ ಕೈಯ ಅಂಗುಷ್ಠವನ್ನು ಮುಟ್ಟಿದರೆ ಕಳ್ಳತನ ಮಾಡಿದವಳು ಆತನ ಪುತ್ರಿ ಎಂದು. ಈ ರೀತಿ. ಚೋರ ಪ್ರಶ್ನೆಯಲ್ಲಿ ಕಳ್ಳನ ವಿಚಾರ ತಿಳಿಯಬೇಕು.

ಮಾತರಂ ಜಠರೇ ಮೂರ್ಧ್ನಿ ಗುರುಂ ದಕ್ಷಿಣವಾಮಕೌ । ಬಾಹೂ
ಭ್ರಾತ್ರಾಽಥ ತತ್ಪತ್ನೀ ಸ್ಪೃಷ್ಟ್ವೈವಂ ಚೌರಮಾದಿಶೇತ್ ॥೨೬॥

ಪ್ರಚ್ಛಕನು 1. ತನ್ನ ಉದರವನ್ನು ಪ್ರಶ್ನಕಾಲದಲ್ಲಿ ಮುಟ್ಟಿದರೆ ಕಳ್ಳತನ ಮಾಡಿದವಳು ಆತನ ತಾಯಿ ಎಂದು. 2. ತನ್ನ ತಲೆಯನ್ನು ಮುಟ್ಟಿದರೆ ಆತನ ಗುರುವು ಕಳ್ಳನೆಂದು. 3. ತನ್ನ ಬಲಭುಜವನ್ನು ಮುಟ್ಟಿದರೆ ಆತನ ಸಹೋದರನು ಕಳ್ಳನೆಂದು. 4. ತನ್ನ ಎಡಭುಜವನ್ನು ಮುಟ್ಟಿದರೆ ಆತನ ಸಹೋದರನ ಪತ್ನಿಯು ಕಳ್ಳತನ ಮಾಡಿದವಳು ಎಂದು ತಿಳಿಯಬೇಕು.

ಅಂತರಙ್ಗಮವಮುಚ್ಯ ಬಾಹ್ಯಗಸ್ಪರ್ಶನಂ ಯದಿ ಕರೋತಿ
ಪೃಚ್ಛಕಃ । ಶ್ಲೇಷ್ಮಮೂತ್ರಶಕೃತಸ್ತ್ಯಜತ್ಯಥೋ ಪಾತಯೇತ್
ಕರತಲಸ್ಥವಸ್ತು ಚೇತ್ ॥೨೭॥ ಭೃಶಮವನಾಮಿತಾಙ್ಗಪರಿವೋ-
ಟನತೋಽಪ್ಯಥವಾ ಜನಧೃತರಿಕ್ತಭಾಣ್ಡಮವಲೋಕ್ಯ ಚ ಚೌರ.

ಜನನಮ್ । ಹೃತಪತಿತಕ್ಷತಾಸ್ಮೃತ ವಿನಷ್ಟವಿಭಗ್ನಗತೋನ್ಮುಷಿತ-
ಮೃತಾದ್ಯನಿಷ್ಟರವತೋ ಲಭತೇ ನ ಹೃತಮ್ ॥೨೮॥

**ನಷ್ಟವಸ್ತು ಲಾಭಾಲಾಭ ವಿಚಾರ:** ಪ್ರಚ್ಛಕನು 1. ಮೊದಲು ಅಭ್ಯಂತರ ಅಂಗಗಳನ್ನು ಮುಟ್ಟಿ ಅನಂತರ ಬಾಹ್ಯ ಅಂಗಗಳನ್ನು ಮುಟ್ಟಿದರೆ, 2. ಕಫವನ್ನು ಉಗುಳಿದರೆ, 3. ಮಲ-ಮೂತ್ರ ವಿಸರ್ಜನೆ ಮಾಡಿದರೆ, 4. ಕೈಯಲ್ಲಿದ್ದ ವಸ್ತುವನ್ನು ಕೆಳಗೆ ಬೀಳಿಸಿದರೆ, 5. ಶರೀರದ ಅವಯವಗಳನ್ನು ಹೆಚ್ಚು ಬಗ್ಗಿಸಿ ಚಟ-ಚಟ ಶಬ್ದ ಮಾಡಿದರೆ, 6. ಯಾರಾದರೂ ಅಲ್ಲಿಗೆ ತಂದ ರಿಕ್ತಪಾತ್ರೆಯನ್ನು ನೋಡಿದರೆ, 7. ಕಳ್ಳರನ್ನು ನೋಡಿದರೆ, ಅಥವಾ 8. ಆ ಕಾಲದಲ್ಲಿ "ಅಪಹರಿಸಲ್ಪಟ್ಟಿತು," "ಬಿದ್ದು ಹೋಯಿತು," "ಗಾಯ ಗೊಂಡಿತು," ಪೆಟ್ಟಾಯಿತು, ತುಂಡಾಯಿತು ಅಥವಾ ನಷ್ಟವಾಯ್ತು" "ಕದ್ದು ಹೋಯಿತು, ಸತ್ತು ಹೋಯಿತು" ಎಂಬ ಮಾತುಗಳು ಕೇಳಿ ಬಂದರೆ ನಷ್ಟ ಅಥವಾ ಕಳುವಾದ ವಸ್ತು ಲಭಿಸುವುದಿಲ್ಲ ಎಂದು ತಿಳಿಯಬೇಕು.

ನಿಗದಿತಮಿದಂ ಯತ್ತತ್ಸರ್ವಂ ತುಷಾಸ್ಥಿ ವಿಷಾದಿಕೈಃ । ಸಹ ಮೃತಿ-
ಕರಂ ಪೀಡಾರ್ತಾನಾಂ ಸಮಂ ರುದಿತಕ್ಷತೈಃ ॥

**ರೋಗಪೀಡಿತನ ಮರಣ ಚಿಂತನೆ:**-ಚೋರಪ್ರಶ್ನೆಗೆ ಸಂಬಂಧಪಟ್ಟು ಹೇಳಿದ ಅಂತರಂಗ ಅಂಗಾಂಗ ಸ್ಪರ್ಶನ ಇತ್ಯಾದಿಯೊಂದಿಗೆ ಹೊಟ್ಟು, ಎಲುಬು, ವಿಷ ಕಂಡುಬಂದರೆ, ಕೂಗುವುದು ಕೇಳಲ್ಪಟ್ಟರೆ, ಸೀನುವುದು ಕಂಡುಬಂದರೆ ರೋಗ ಪ್ರಶ್ನೆಯಲ್ಲಿ ರೋಗಿಯು ಬದುಕುವುದಿಲ್ಲ ಎಂದು ತಿಳಿಯಬೇಕು.

ಅಥ ರೋಗಾಭಿಘಾತಚ್ಛರ್ದಮೂತ್ರಪುರಿಷೋತ್ಸರ್ಗೇ ಕೇಶಾಸ್ಥಿ-
ಭಸ್ಮತುಷವಿಷಾದೀನಾಮಶುಭಾನಾಂ ದರ್ಶನೇ ತಥಾ ಛಿನ್ನಭಿನ್ನ-
ವ್ಯಾಪನ್ನಮೃತಾವಕ್ಷತಜಗ್ಧದಗ್ಧ ಬದ್ಧ ಪಾಟಿತರುದಿತಶಬ್ದಶ್ರವಣೇ
ವಾ ರೋಗಿಣಾಂ ಮರಣಮಾದಿಶೇತ್ ॥ಇತಿ॥

**ಪರಾಶರಮತ:**-ರೋಗಪ್ರಶ್ನೆಯಲ್ಲಿ ವಾಂತಿ ಮಾಡುವುದು, ಮಲ-ಮೂತ್ರ ವಿಸರ್ಜನೆ, ಕೂದಲು, ಎಲುಬು, ಭಸ್ಮ, ಹೊಟ್ಟು, ವಿಷ ಇತ್ಯಾದಿ ಅಶುಭ ವಸ್ತುಗಳು ಪ್ರಶ್ನಕಾಲದಲ್ಲಿ ಕಂಡು ಬರುವುದು, ಹಾಗೆಯೇ "ತುಂಡಾಯಿತು", "ಒಡಕು ಆಗಿದೆ, ಅಪಹೃತವಾಯ್ತು. ಸತ್ತುಹೋಯಿತು, ಘಾಯಗೊಂಡಿತು, ಸುಟ್ಟುಹೋಯ್ತು,ಕಟ್ಟಲ್ಪಟ್ಟಿತು, ಹರಿದು ಹೋಯಿತು, ಬಂಧನವಾಯ್ತು,"

ಕೂಗುವುದು ಇತ್ಯಾದಿ ಶಬ್ದ ಕೇಳಿಬಂದರೆ ರೋಗಿಯು ಮರಣ ಹೊಂದುತ್ತಾನೆ ಎಂದು ತಿಳಿಯಬೇಕು.

**ಅವಯವಮಪಿ ಸ್ಪೃಷ್ಟ್ವಾಽಂತಃಸ್ಥಂ ದೃಢಂ ಮರುದಾಹರೇದತಿ.**
**ಬಹು ತದಾ ಭುಕ್ತ್ವಾಽನ್ನಂ ಸಂಸ್ಥಿತಃ ಸುಹಿತೋ ವದೇತ್ ॥೧೯॥**

ಭೋಜನ ವಿಚಾರ:- ಪ್ರುಚ್ಛಕನು ಅಭ್ಯಂತರ ಅಂಗಗಳನ್ನು ಮುಟ್ಟಿ ಶ್ವಾಸವನ್ನು ಬಿಟ್ಟರೆ, ಆತನು ಹೆಚ್ಚು ಅನ್ನಉಳ್ಳಭೋಜನ ಸೇವಿಸಿರುತ್ತಾನೆ ಎಂದು ಹೇಳಬೇಕು.

**ಲಲಾಟಸ್ಪರ್ಶನಾಚ್ಛೂಕದರ್ಶನಾಚ್ಛಾಲಿಜೌದನಮ್ । ಉರಃಸ್ಪ-**
**ರ್ಶಾತ್ ಷಷ್ಟಿಕಾಖ್ಯಂ ಗ್ರೀವಾಸ್ಪರ್ಶೇ ಚ ಯಾವಕಮ್ ॥೨೦॥**

ಪ್ರುಚ್ಛಕನು ತನ್ನ ಹಣೆಯನ್ನು ಮುಟ್ಟಿದರೆ ಅಥವಾ ಕಾಲುಗಳನ್ನು ನೋಡಿದರೆ ಬೇಯಿಸಿದ ಅನ್ನವನ್ನು ಭುಂಜಿಸಿದ್ದಾನೆ ಎಂದು ತಿಳಿಯಬೇಕು. ಅವನು ಎದೆಯನ್ನು ಮುಟ್ಟಿದರೆ ಧಾನ್ಯದಿಂದ ಕೂಡಿದ ಅನ್ನವನ್ನು ಮತ್ತು ಕುತ್ತಿಗೆಯನ್ನು ಮುಟ್ಟಿದರೆ ಯವಾನ್ನವನ್ನು ಸೇವಿಸಿರುತ್ತಾನೆ ಎಂದು ತಿಳಿಯಬೇಕು.

**ಕುಕ್ಷಿಕುಚಜಠರಜಾನುಸ್ಪರ್ಶೇ ಮಾಷಾಃ ಪಯಸ್ತಿಲಯವಾಗ್ವಃ ।**
**ಆಸ್ವಾದಯತೇ ಚೋಷ್ಠೌ ಲಿಹತೇ ಮಧುರಂ ರಸಂ ಜ್ಞೇಯಮ್॥**

ಪ್ರುಚ್ಛಕನು ಸೊಟ್ಟೆಯನ್ನು ಮುಟ್ಟಿದರೆ ಉದ್ದನ್ನು, ಸ್ತನ ಮುಟ್ಟಿದರೆ ಹಾಲನ್ನು, ಉದರ ಮುಟ್ಟಿದರೆ ಎಳ್ಳನ್ನು, ತೊಡೆಗಳನ್ನು ಮುಟ್ಟಿದರೆ ಜೇಳೆಯನ್ನು, ತುಟಿಗಳನ್ನು ನೆಕ್ಕುವುದು ಅಥವಾ ಚಪ್ಪರಿಸಿದರೆ ಸಿಹಿವಸ್ತುವನ್ನು ಸೇವಿಸಿರುತ್ತಾನೆ ಎಂದು ತಿಳಿಯಬೇಕು.

**ವಿಸೃಕ್ಕೇ ಸ್ಫೋಟಯೇಜ್ಜಿಹ್ವಾಮಾಮ್ಲೇ ವಕ್ತ್ರಂ ವಿಕೂಣಯೇತ್।**
**ಕಟುಕೇಽಥ ಕಷಾಯೇಽಥ ಹಿಕ್ಕೇತ್ ಕ್ಷ್ಮೀವೇಚ್ಚ ಸೈನ್ಧವೇ ॥೨೧॥**

ಪ್ರುಚ್ಛಕನು ತನ್ನ ನಾಲಗೆಯನ್ನು ಬಾಯಿಯ ಒಳಗೆ ಅತ್ತಿತ್ತ ಪಟ-ಪಟ ತಾಗಿಸಿದರೆ ಹುಳಿ ವಸ್ತುವನ್ನು, ಮುಖವನ್ನು ಸಿಂಡರಿಸಿದರೆ ಖಾರವಸ್ತುವನ್ನು, ಆತನಿಗೆ ಬಿಕ್ಕಳಿಕೆ ಬಂದರೆ ಕಷಾಯ ಅಥವಾ ಒಗರುವಸ್ತುವನ್ನು, ಉಗುಳಿದರೆ ಉಪ್ಪಾದ ವಸ್ತುವನ್ನು ಸೇವಿಸಿರುತ್ತಾನೆ ಎಂದು ತಿಳಿಯಬೇಕು.

**ಶ್ಲೇಷ್ಮತ್ಯಾಗೇ ಶುಷ್ಕತಿಕ್ತಂ ತದಲ್ಪಂ ಶ್ರುತ್ವಾ ಕ್ರವ್ಯಾದಂ ವಾ ಪ್ರೇಕ್ಷ್ಯ ವಾ ಮಾಂಸಮಿಶ್ರಮ್ । ಭ್ರೂಗಣ್ಡೌಷ್ಠಸ್ಪರ್ಶನೇ ಶಾಕುನಂ ತದ್ಭುಕ್ತಂ ತೇನೇತ್ಯುಕ್ತಮೇತನ್ನಿಮಿತ್ತಮ್ ॥೩೩॥**

ಪೃಚ್ಛಕನು ಕಫವನ್ನು ಉಗುಳಿದರೆ ಆತನು ನಿರಸ ಅಥವಾ ಒಣಗಿದ ಮತ್ತು ಕಹಿಯಾದ ಅಲ್ಪ ಆಹಾರವನ್ನು ಸೇವಿಸಿರುತ್ತಾನೆ. ಪ್ರಶ್ನಕಾಲದಲ್ಲಿ ಮಾಂಸಾಹಾರಿ ಪ್ರಾಣಿಯು ಕಂಡುಬಂದರೆ ಮಾಂಸಮಿಶ್ರಿತ ಆಹಾರವನ್ನು ಸೇವಿಸಿರುತ್ತಾನೆ. ಆತನು ತನ್ನ ಹುಬ್ಬು, ಗಲ್ಲ ಅಥವಾ ತುಟಿಯನ್ನು ಮುಟ್ಟಿದರೆ ಪಕ್ಷಿಯ ಮಾಂಸ ಉಳ್ಳ ಆಹಾರ ಸೇವಿಸಿರುತ್ತಾನೆ. ಈ ಎಲ್ಲ ಲಕ್ಷಣಗಳಿಂದ ಪೃಚ್ಛಕನು ಸೇವಿಸಿದ ಆಹಾರ ವಿಚಾರ ಚಿಂತನೆ ಮಾಡಬೇಕು.

**ಮೂರ್ಧಗಲಕೇಶಹನುಶಂಖಕರ್ಣಜಂಘಮ್ ವಸ್ತಿಂ ಚ ಸ್ಪೃಷ್ಟ್ವಾ। ಗಜಮಹಿಷಮೇಷಶೂಕರಗೋಶಶಮೃಗಮಹಿಷಮಾಂಸಯುಗ್ಭುಕ್ತಮ್ ॥೩೪॥**

ಪೃಚ್ಛಕನು ಶಿರಸ್ಸನ್ನು ಮುಟ್ಟಿದರೆ ಆನೆಯ ಮಾಂಸ, ಕುತ್ತಿಗೆಯನ್ನು ಮುಟ್ಟಿದರೆ ಎಮ್ಮೆ ಅಥವಾ ಕೋಣದ ಮಾಂಸವನ್ನೂ, ಕೂದಲನ್ನು ಮುಟ್ಟಿದರೆ ಕುರಿ ಮಾಂಸವನ್ನು, ಗಲ್ಲವನ್ನು ಮುಟ್ಟಿದರೆ ಹಂದಿಯ ಮಾಂಸವನ್ನು, ಕಪಾಲದ ಎಲುಬನ್ನು ಮುಟ್ಟಿದರೆ ಗೋಮಾಂಸವನ್ನು, ಕಿವಿಯನ್ನು ಮುಟ್ಟಿದರೆ ಮೊಲದ ಮಾಂಸವನ್ನು, ಕಣಕಾಲು ಮುಟ್ಟಿದರೆ ಜಿಂಕೆಯ ಮಾಂಸವನ್ನು, ಬಸ್ತಿಯನ್ನು (ಮೂತ್ರಾಶಯ) ಮುಟ್ಟಿದರೆ ಎಮ್ಮೆಯ ಮಾಂಸ ಮಿಶ್ರಿತ ಆಹಾರವನ್ನು ಸೇವಿಸಿರುತ್ತಾನೆ ಎಂದು ತಿಳಿಯಬೇಕು.

**ದೃಷ್ಟೇ ಶ್ರುತೇಽಪ್ಯಶಕುನೇ ಗೋಧಾಮತ್ಸ್ಯಾಮಿಷಂ ವದೇದ್ಭುಕ್ತಮ್ । ಗರ್ಭಿಣ್ಯಾ ಗರ್ಭಸ್ಯ ಚ ನಿಪತನಮೇವಂ ಪ್ರಕಲ್ಪಯೇತ್ ಪ್ರಶ್ನೇ ॥೩೫॥**

ಪ್ರಶ್ನಕಾಲದಲ್ಲಿ ಅಶುಭಶಕುನ ನೋಡಲ್ಪಟ್ಟರೆ ಅಥವಾ ಕೇಳಿದರೆ ಪೃಚ್ಛಕನು ಉಡು ಅಥವಾ ಮೀನಿನ ಮಾಂಸ ಸೇವಿಸಿದ್ದಾನೆ ಎಂದು ತಿಳಿಯಬೇಕು.

**ಗರ್ಭಪ್ರಶ್ನೇ:**-ಗರ್ಭಿಣಿಯ ವಿಚಾರ ಪ್ರಶ್ನಕಾಲದಲ್ಲಿ ಅಶುಭಶಕುನ ನೋಡಲ್ಪಟ್ಟರೆ ಅಥವಾ ಕೇಳಿದರೆ ಆ ಗರ್ಭಿಣೀ ಸ್ತ್ರೀಗೆ ಗರ್ಭಸ್ರಾವ ಆಗುತ್ತದೆ ಎಂದು ತಿಳಿಯಬೇಕು.

**ಪುಂಸ್ತ್ರೀನಪುಂಸಕಾಖ್ಯೇ ದೃಷ್ಟೇಽನುಮಿತೇ ಪುರಃಸ್ಥಿತೇ ಸ್ಪೃಷ್ಟೇ।**
**ತಜ್ಜನ್ಮ ಭವತಿ ಪಾನಾನ್ನಪುಷ್ಪಫಲದರ್ಶನೇ ಚ ಶುಭಮ್ ॥೩೬॥**

ಗರ್ಭಿಣೀ ಸ್ತ್ರೀಯು ಯಾವ ಮಗು ಹೆರುತ್ತಾಳೆ? ಎಂಬ ಪ್ರಶ್ನಕಾಲದಲ್ಲಿ 1. ಪುರುಷನು ಕಂಡು ಬಂದರೆ ಪುರುಷ ವಿಚಾರ ತರ್ಕ ಅಥವಾ ಊಹೆ ಸಂಭವಿಸಿದರೆ, ಪುರುಷ ಚಿಂತನೆ ಆದರೆ ಅಥವಾ ಪುರುಷನನ್ನು ಮುಟ್ಟಿದರೆ ಆ ಬಸುರಿಯು ಗಂಡು ಶಿಶು ಹೆರುತ್ತಾಳೆ ಎಂದು ತಿಳಿಯಬೇಕು. 2. ಆ ಕಾಲದಲ್ಲಿ ಸ್ತ್ರೀಯು ಕಂಡು ಬಂದರೆ, ಹೆಂಗಸಿನ ವಿಚಾರ ತರ್ಕ ಅಥವಾ ಊಹೆ ಸಂಭವಿಸಿದರೆ, ಸ್ತ್ರೀ ಚಿಂತನೆ ಆದರೆ ಅಥವಾ ಸ್ತ್ರೀಯನ್ನು ಮುಟ್ಟಿದರೆ ಆ ಬಸುರಿಯು ಹೆಣ್ಣು ಶಿಶು ಹೆರುತ್ತಾಳೆ ಎಂದು ತಿಳಿಯಬೇಕು, 3. ಆ ಕಾಲದಲ್ಲಿ ನಪುಂಸಕ ವ್ಯಕ್ತಿ ಕಂಡು ಬಂದರೆ, ನಪುಂಸಕ ವಿಚಾರ ತರ್ಕ ಅಥವಾ ಊಹೆ ಸಂಭವಿಸಿದರೆ, ನಪುಂಸಕ ಚಿಂತನೆ ಆದರೆ ಅಥವಾ ನಪುಂಸಕನನ್ನು ಮುಟ್ಟಿದರೆ ಆ ಬಸುರಿಯು ನಪುಂಸಕ ಶಿಶುವನ್ನು ಹೆರುತ್ತಾಳೆ ಎಂದು ತಿಳಿಯಬೇಕು. 4. ಪ್ರಶ್ನಕಾಲದಲ್ಲಿ ಆಸವ, ಅನ್ನ (ಭೋಜನಾದಿ ತಿನ್ನುವ ಆಹಾರ) ಪುಷ್ಪ, ಫಲ ಇವುಗಳು ಕಂಡು ಬಂದರೆ ಆ ಬಸುರಿಗೆ ಸುಖ-ಪ್ರಸವ ಆಗುತ್ತದೆ ಎಂದು ತಿಳಿಯಬೇಕು.

**ಅಙ್ಗುಷ್ಠೇನ ಭ್ರೂದರಂ ವಾಙ್ಗುಲಿಂ ವಾ ಸ್ಪೃಷ್ಟ್ವಾ ಪೃಚ್ಛೇದ್**
**ಗರ್ಭಚಿಂತಾ ತದಾ ಸ್ಯಾತ್ । ಮಧ್ವಾಜ್ಯಾದ್ಯೈರ್ಹೇಮರತ್ನಪ್ರ-**
**ವಾಲೈರಗ್ರಸ್ಥೈರ್ವಾ ಮಾತೃಧಾತ್ರ್ಯಾತ್ಮಜೈಶ್ಚ ॥೩೭॥**

ಪ್ರಶ್ನಕಾಲದಲ್ಲಿ 1. ಸ್ತ್ರೀಯು ತನ್ನ ಅಂಗುಷ್ಠದಿಂದ ಹುಬ್ಬು, ಉದರ, ಅಥವಾ ಬೆರಳುಗಳನ್ನು ಮುಟ್ಟಿದರೆ ಆ ಸ್ತ್ರೀಯು ಬಸುರಿ ಎಂದು ತಿಳಿಯಬೇಕು. ಪ್ರಶ್ನಕಾಲದಲ್ಲಿ 2. ಜೇನು, ತುಪ್ಪ, ಇತ್ಯಾದಿ, ಬಂಗಾರ, ರತ್ನ, ಹವಳ, ಅವಳ ತಾಯಿ, ದಾಸಿ ಮತ್ತು ಪುತ್ರನನ್ನು ನೋಡಿದರೆ ಆ ಸ್ತ್ರೀಯು ಗರ್ಭಿಣಿ ಎಂದು ತಿಳಿಯಬೇಕು.

**ಗರ್ಭಯುತಾ ಜಠರೇ ಕರಗೇ ಸ್ಯಾದ್ ದುಷ್ಟನಿಮಿತ್ತವಶಾತ್ತದು-**
**ದಾಸಃ । ಕರ್ಷತಿ ತಜ್ಜಠರಂ ಯದಿ ಪೀಠೋತ್ಪೀಡನತಃ ಕರಗೇ ಚ**
**ಕರೇಽಪಿ ॥೩೮॥**

ಪ್ರಶ್ನಕಾಲದಲ್ಲಿ ಸ್ತ್ರೀಯು ತನ್ನ ಕೈಯಿಂದ ಉದರವನ್ನು ಮುಟ್ಟಿದರೆ ಆ ಸ್ತ್ರೀಯು ಬಸುರಿ ಎಂದು ತಿಳಿಯಬೇಕು. ಪ್ರಶ್ನಕಾಲದಲ್ಲಿ ಅಶುಭ ಶಕುನಗಳಿಂದ ಆ ಸ್ತ್ರೀಯು ಉದಾಸೀನಳು ಆಗಿದ್ದರೆ ಅವಳಿಗೆ ಗರ್ಭಸ್ರಾವ ಸಂಭವಿಸಬಹುದು. ಆ ಸ್ತ್ರೀಯು ಕೂತುಕೊಂಡ ಆಸನದಲ್ಲಿ, ವೇದನೆಯಿಂದ ಸರಿಯಾಗಿ ಕುಳಿತು ಕೊಳ್ಳಲು ಆಗದೇ ಅಥವಾ ಒಂದು ಕೈಮೇಲೆ ಇನ್ನೊಂದು ಕೈ ಇಟ್ಟರೆ ಆಕೆಗೆ ಗರ್ಭಸ್ರಾವ ಆಗುತ್ತದೆ ಎಂದು ತಿಳಿಯಬೇಕು.

**ಘ್ರಾಣಾಯಾ ದಕ್ಷಿಣೇ ದ್ವಾರೇ ಸ್ಪೃಷ್ಟೇ ಮಾಸೋತ್ತರಂ ವದೇತ್।**
**ವಾಮೇಽಬ್ದೌ ಕರ್ಣ ಏವಂ ಮಾ ದ್ವಿಚತುರ್ಭಿಃ ಶ್ರುತಿಸ್ತನೇ ॥**

ಪ್ರಶ್ನಕಾಲದಲ್ಲಿ ಸ್ತ್ರೀಯು ತನ್ನ ಮೂಗಿನ ದ್ವಾರವನ್ನು ಮುಟ್ಟಿದರೆ ಆಕೆಯು ಒಂದು ತಿಂಗಳ ನಂತರ ಬಸುರಿ ಆಗುತ್ತಾಳೆ ಎಂದು ತಿಳಿಯಬೇಕು. ಮೂಗಿನ ಎಡದ್ವಾರವನ್ನು ಅಥವಾ ಎಡ ಕಿವಿಯನ್ನು ಮುಟ್ಟಿದರೆ ಆಕೆಯು ಎರಡು ವರ್ಷದ ನಂತರ ಗರ್ಭವತಿ ಆಗುತ್ತಾಳೆ ಎಂದು ತಿಳಿಯಬೇಕು. ಬಲ ಕಿವಿ ಅಥವಾ ಸ್ತನಗಳನ್ನು ಮುಟ್ಟಿದರೆ ಆಕೆಯು ಕ್ರಮವಾಗಿ ಎರಡು ತಿಂಗಳು ಮತ್ತು ನಾಲ್ಕು ತಿಂಗಳ ನಂತರ ಬಸುರಿ ಆಗುತ್ತಾಳೆ ಎಂದು ತಿಳಿಯಬೇಕು.

**ವೇಣೀಮೂಲೇ ತ್ರೀನ್ ಸುತಾನ್ ಕನ್ಯಕೇ ದ್ವೇ ಕರ್ಣೇ ಪುತ್ರಾನ್**
**ಪಂಚ ಹಸ್ತೇ ತ್ರಯಂ ಚ । ಅಂಗುಷ್ಠಾಂತೇ ಪಂಚಕಂ ಚಾನು**
**ಪೂರ್ವ್ಯಾ ಪಾದಾಙ್ಗುಷ್ಠೇ ಪಾರ್ಷ್ಣಿಯುಗ್ಮೇಽಪಿ ಕನ್ಯಾಮ್ ॥**

ಪ್ರಚ್ಛಕಳು ತನ್ನ ತಲೆಕೂದಲಿನ ಬುಡವನ್ನು ಮುಟ್ಟಿದರೆ ಆಕೆಗೆ ಮೂರು ಪುತ್ರರು ಮತ್ತು ಇಬ್ಬರು ಪುತ್ರಿಯರು ಜನಿಸುತ್ತಾರೆ. ಆಕೆಯು ಎರಡು ಕಿವಿಗಳನ್ನು ಮುಟ್ಟಿದರೆ ಆಕೆಗೆ ಐದು ಪುತ್ರರು ಜನಿಸುತ್ತಾರೆ. ಕೈಗಳನ್ನು ಮುಟ್ಟಿದರೆ ಮೂರು ಪುತ್ರರು, ಕಿರುಬೆರಳು ಮುಟ್ಟಿದರೆ ಒಬ್ಬ ಪುತ್ರ, ಪವಿತ್ರದ ಬೆರಳು ಮುಟ್ಟಿದರೆ ಎರಡು ಪುತ್ರರು, ಮಧ್ಯ ಬೆರಳು ಮುಟ್ಟಿದರೆ ಮೂರು ಪುತ್ರರು, ತೋರ್ಬೆರಳು ಮುಟ್ಟಿದರೆ ನಾಲ್ಕು ಪುತ್ರರು, ಅಂಗುಷ್ಠ ಮುಟ್ಟಿದರೆ ಐದು ಪುತ್ರರು ಜನಿಸುತ್ತಾರೆ, ಆಕೆಯು ಕಾಲಿನ ಹೆಬ್ಬೆಟ್ಟು ಅಥವಾ ಹಿಮ್ಮಡಿ ಮುಟ್ಟಿದರೆ ಆಕೆಗೆ ಒಬ್ಬ ಪುತ್ರಿಯು ಜನಿಸುತ್ತಾಳೆ ಎಂದು ತಿಳಿಯಬೇಕು.

**ಸವ್ಯಾಸವ್ಯೋರುಸಂಸ್ಪರ್ಶೇ ಸೂತೇ ಕನ್ಯಾಸುತದ್ವಯಮ್ ।**
**ಸ್ಪೃಷ್ಟೇ ಲಲಾಟಮಧ್ಯಾಂತೇ ಚತುಸ್ತ್ರೀತನಯಾ ಭವೇತ್ ॥೪೧॥**

ಪ್ರಚ್ಛಕಳು ತನ್ನ ಬಲತೊಡೆಯನ್ನು ಮುಟ್ಟಿದರೆ ಅವಳಿಗೆ ಎರಡು ಪುತ್ರಿಯರು, ಎಡತೊಡೆಯನ್ನು ಮುಟ್ಟಿದರೆ ಎರಡು ಪುತ್ರರು ಜನಿಸುತ್ತಾರೆ.

ಆಕೆಯು ಹಣೆಯ ಮಧ್ಯಭಾಗವನ್ನು ಮುಟ್ಟಿದರೆ ನಾಲ್ಕು ಪುತ್ರರು, ಹಣೆಯ ತುದಿಯನ್ನು ಮುಟ್ಟಿದರೆ ಮೂರು ಪುತ್ರರು ಜನಿಸುತ್ತಾರೆ.

> ಶಿರೋಲಲಾಟಭ್ರೂಕರ್ಣಗಣ್ಡಂ ಹನೂರದಾ ಗಲವರ್ । ಸವ್ಯಾಪ-
> ಸವ್ಯಸ್ಕಂಧಶ್ಚ ಹಸ್ತೌ ಚಿಬುಕನಾಲಕವರ್ ॥೪೨॥ ಉರಃ ಕುಚಂ
> ದಕ್ಷಿಣಮಪ್ಯಸವ್ಯಂ ಹೃತ್ಪಾರ್ಶ್ವಮೇವಂ ಜಠರಂ ಕಟಿಶ್ಚ । ಸ್ಫಿಕ್-
> ಪಾಯುಸಂಧ್ಯೂರುಯುಗಂ ಚ ಜಾನೂ ಜಂಘೇऽಥ ಪಾದಾವಿತಿ
> ಕೃತ್ತಿಕಾದೌ ॥೪೩॥

ಶಿಶು ಜನಿಸುವ ನಕ್ಷತ್ರ:-ಬಸುರಿಯು ಪ್ರಶ್ನಕಾಲದಲ್ಲಿ 1. ಶಿರಸ್ಸನ್ನು ಮುಟ್ಟಿದರೆ ಶಿಶುವು ಕೃತ್ತಿಕಾ ನಕ್ಷತ್ರದಲ್ಲಿ ಜನಿಸುತ್ತದೆ. 2. ಹಣೆ-ರೋಹಿಣಿ. 3. ಹುಬ್ಬು-ಮೃಗಶಿರಾ, 4. ಕಿವಿ-ಆರ್ದ್ರಾ, 5. ಕೆನ್ನೆ-ಪುನರ್ವಸು, 6. ಗಲ್ಲ-ಪುಷ್ಯಾ, 7. ಹಲ್ಲು-ಆಶ್ಲೇಷಾ, 8. ಕುತ್ತಿಗೆ-ಮಘಾ, 9. ಬಲಭುಜ-ಹುಬ್ಬಾ, 10. ಎಡಭುಜ-ಉತ್ತರಾ, 11. ಕೈ-ಹಸ್ತಾ, 12. ಗಲ್ಲದತುದಿ-ಚಿತ್ರಾ, 13. ಕಂಠನಾಳ-ಸ್ವಾತಿ, 14. ಎದೆ-ವಿಶಾಖಾ, 15. ಬಲಸ್ತನ-ಅನುರಾಧಾ, 16. ಎಡಸ್ತನ-ಜ್ಯೇಷ್ಠಾ, 17. ಹೃದಯ-ಮೂಲಾ, 18. ಬಲಬದಿ-ಪೂರ್ವಾಷಾಢಾ, 19. ಎಡಬದಿ-ಉತ್ತರಾಷಾಢಾ, 20. ಜಠರ-ಶ್ರವಣಾ, 21. ಸೊಂಟ-ಧನಿಷ್ಠಾ 22. ಗುದ-ಶತಭಿಷಾ, 23. ಬಲತೊಡೆ-ಪೂರ್ವಾಭಾದ್ರಾ, 24. ಎಡತೊಡೆ-ಉತ್ತರಾಭಾದ್ರಾ, 25. ಮೊಣಕಾಲು-ರೇವತಿ, 26. ಕಣಕಾಲು-ಅಶ್ವಿನಿ. 27. ಪಾದಗಳು-ಭರಣೀ, ಈ ರೀತಿ ಬಸುರಿಯು ಮುಟ್ಟಿದ ಅಂಗತುಲ್ಯ ನಕ್ಷತ್ರದಲ್ಲಿ ಶಿಶುವು ಜನಿಸುತ್ತದೆ ಎಂದು ತಿಳಿಯಬೇಕು.

> ಇತಿ ನಿಗದಿತಮೇತದ್ ಗಾತ್ರಸಂಸ್ಪರ್ಶಲಕ್ಷ್ಮ ಪ್ರಕಟಮಭಿಮು-
> ತಾಪ್ತೈ ವೀಕ್ಷ್ಯ ಶಾಸ್ತ್ರಾಣಿ ಸಮ್ಯಕ್ । ವಿಪುಲಮತಿರುದಾರೋ-
> ವೇತ್ತಿ ಯಃ ಸರ್ವಮೇತನ್ನರಪರಿಜನತಾಭಿಃ ಪೂಜ್ಯತೇऽಸೌ
> ಸದೈವ ॥೪೪॥

ಈ ಪ್ರಕಾರ ಪ್ರಶ್ನಕಾಲದಲ್ಲಿ ಸಂಭವಿಸುವ ಅಂಗ ಲಕ್ಷಣ ವಿಚಾರಗಳನ್ನು ಶಾಸ್ತ್ರಾಧಾರದಿಂದ ಜನರಿಗೆ ಉಪಯುಕ್ತ ಆಗುವಂತೆ ಇಲ್ಲಿ ವಿವರಿಸಿ ಬರೆದಿರುತ್ತೇವೆ. ಬುದ್ಧಿವಂತನಾದ ದೈವಜ್ಞನು, ಇವುಗಳನ್ನೆಲ್ಲ ಬಲ್ಲವನಾಗಿ, ಉದಾರಚಿತ್ತ ಉಳ್ಳವನು ಆಗಿದ್ದರೆ, ರಾಜರಿಂದಲೂ, ಜನರಿಂದಲೂ ಪೂಜಿಸಲ್ಪಡುತ್ತಾನೆ.

ಇಲ್ಲಿಗೆ ಬೃಹತ್‌ಸಂಹಿತಾ ಅಂಗಲಕ್ಷಣ ಎಂಬ ಅಧ್ಯಾಯ ಮುಗಿಯಿತು.

# ಸ್ವಪ್ನಫಲ ವಿಚಾರ

ಭಾವೀ ಜೀವನದಲ್ಲಿ ಸಂಭವಿಸಬಹುದಾದ ಕೆಲವೊಂದು ಪ್ರಮುಖ ಘಟನೆಗಳು ಪೂರ್ವ ಸೂಚಿತವಾಗಿ ಕನಸಿನಲ್ಲಿ ಕಂಡು ಬರುತ್ತದೆ. ಶಕುನಗಳನ್ನು ಆಧರಿಸಿ ಭಾವೀ ಜೀವನದಲ್ಲಿ ಸಂಭವಿಸುವ ಶುಭಾಶುಭ ಫಲಗಳನ್ನು ನಿರ್ಣಯಿಸುವಂತೆ, ಕನಸಿನಲ್ಲಿ ನೋಡಿದ ವಸ್ತು, ಜೀವಜಂತು, ಘಟನೆಗಳು ಇತ್ಯಾದಿ ದೃಶ್ಯಗಳಿಂದಲೂ ಮುಂದಕ್ಕೆ ಸಂಭವಿಸಬಹುದಾದ ಶುಭಾಶುಭ ಫಲಗಳನ್ನು ತಿಳಿಯಬಹುದು. ಕನಸಿನಲ್ಲಿ ನೋಡಿದ ಸಕಲ ವಸ್ತುಸ್ಥಿತಿಯ ತುಲ್ಯ ಸುಖ-ದು:ಖ ವಿಚಾರಗಳನ್ನು ಸೂಚಿಸುತ್ತದೆ.

ದೃಷ್ಟ: ಶ್ರುತಾನುಭೂತಶ್ಚ ಪ್ರಾರ್ಥಿತ: ಕಲ್ಪಿತಸ್ತಥಾ ।
ಭಾವಿಕೋ ದೋಷಜಶ್ಚೇತಿ ಸ್ವಪ್ನ: ಸಪ್ತವಿಧೋ ಮತ: ॥

1. ದೃಷ್ಟ (ನೋಡಲ್ಪಟ್ಟ) ದೈನಂದಿನ ಜೀವನದಲ್ಲಿ ನೋಡಿದ ವಸ್ತುಸ್ಥಿತಿಯನ್ನು ಕನಸಿನಲ್ಲಿಯೂ ನೋಡುವುದು. 2. ಶ್ರುತ (ಕೇಳಲ್ಪಟ್ಟ) ಹಿಂದೆ ಕೇಳಿದ ವಿಚಾರಗಳನ್ನು ಕನಸಿನಲ್ಲಿ ಕಾಣುವುದು. 3. ಅನುಭೂತ (ಉಪಲಬ್ಧ) ಅನುಭವದಿಂದ ತಿಳಿದ ವಿಷಯಗಳನ್ನು ಕಾಣುವುದು. 4. ಪ್ರಾರ್ಥಿತ (ಯಾಚಿತ) ತಾನು ಬಯಸಿದ ಅಥವಾ ಅಪೇಕ್ಷಿಸಿದ ವಸ್ತುವಿನ ಪ್ರಾಪ್ತಿಗೋಸ್ಕರ ಪರಮಾತ್ಮನನ್ನು ಪ್ರಾರ್ಥಿಸಿದರೂ ದೀರ್ಘಕಾಲದ ವರೇಗೆ ಲಭಿಸದೇ ಕನಸಿನಲ್ಲಿ ಅವುಗಳ ಪ್ರಾಪ್ತಿಯಾಗುವುದು. 5. ಕಲ್ಪಿತ (ರಚಿತ) ಮನಸ್ಸಿನಲ್ಲಿ ಪರಿಕಲ್ಪಿತ ಅಥವಾ ಚಿಂತಿತ ವಿಚಾರ ಕನಸಿನಲ್ಲಿ ಅನುಭವಿಸುವುದು. 6. ಭಾವಿಕ (ಭೂತಕಾಲ ಮತ್ತು ಭವಿಷ್ಯತ್ ಕಾಲಕ್ಕೆ ಸಂಬಂಧಪಟ್ಟ) ಪೂರ್ವಜನ್ಮದ ಶುಭಾಶುಭ ಕರ್ಮಫಲದಿಂದ ಸಂಭವಿಸಿದ ಹಾಗೂ ಧರ್ಮಾಧರ್ಮ ಫಲರೂಪದಿಂದ ಭಾಗ್ಯವಶಾತ್ ಭೋಗಸೂಚಕ ಆಗಿರುವುದನ್ನು ಕನಸಿನಲ್ಲಿ ಕಾಣುವುದು. 7. ದೋಷಜ (ಶಾರೀರಿಕ ಹೇತುಜನಿತ) ತ್ರಿದೋಷ ಹೇತುಗಳಿಂದ (ವಾತ, ಪಿತ್ತ, ಕಫ) ಸಂಭವಿಸುವ ಕನಸುಗಳು. ಈ ಏಳು ಹೇತುವಿನಿಂದ ಕನಸುಗಳು ಉದ್ಭವಿಸುತ್ತವೆ. ಕಾರಣ, ಆಕೃತಿ, ಭೇದ ಇತ್ಯಾದಿ ಹೇತುಗಳಿಂದ ಸ್ವಪ್ನವು ಏಳು ವಿಧವಾಗಿ ಕಂಡು ಬಂದರೂ ಫಲ ಭೇದದಿಂದ ಸ್ವಪ್ನಗಳು ಎರಡು ವಿಧ ಆಗಿರುತ್ತವೆ. 1. ಸುಸ್ವಪ್ನ ಮತ್ತು 2. ದು:ಸ್ವಪ್ನ.

ಯಾವಾತನಿಗೆ ಸ್ವಪ್ನವು ದರ್ಶನಕಾಲದಲ್ಲಿ ಸುಖವನ್ನು ನೀಡುತ್ತದೋ, ಅದು ಭಾವೀ ಶ್ರೇಯಸ್ಸಿನ ಸೂಚನೆ ನೀಡುತ್ತದೆ ಇದು ಸುಸ್ವಪ್ನ ಆಗುತ್ತದೆ. ವಿಪರೀತವಾದಲ್ಲಿ ಅದು ದು:ಸ್ವಪ್ನ ಆಗುತ್ತದೆ.

## ಸ್ವಪ್ನಫಲ ಪ್ರಾಪ್ತಿಕಾಲ

ಸ್ವಪ್ನಸ್ತು ಪ್ರಥಮೇ ಯಾಮೇ ಸಂವತ್ಸರಫಲಪ್ರದಃ
ದ್ವಿತೀಯೇ ಚಾಷ್ಟಭಿರ್ಮಾಸೈಸ್ತ್ರಿಭಿರ್ಮಾಸೈಸ್ತೃತೀಯಕೇ ॥

ರಾತ್ರಿಯ ಮೊದಲನೇ ಯಾಮದಲ್ಲಿ (ಯಾಮ-3 ಘಂಟೆ ಕಾಲ) ಬಿದ್ದ ಕನಸಿನ ಫಲವು ಒಂದು ವರ್ಷದೊಳಗೆ ಅನುಭವಕ್ಕೆ ಬರುತ್ತದೆ. ಎರಡನೇ ಯಾಮದಲ್ಲಿ ಕಂಡ ಕನಸಿನ ಫಲವು ಎಂಟು ತಿಂಗಳಲ್ಲಿ ಅನುಭವಕ್ಕೆ ಬರುತ್ತದೆ. ಮೂರನೇ ಯಾಮದಲ್ಲಿ ಬಿದ್ದ ಕನಸಿನ ಫಲವು ಮೂರು ತಿಂಗಳೊಳಗೆ ಅನುಭವಕ್ಕೆ ಬರುತ್ತದೆ.

ಚತುರ್ಥೇ ಚಾರ್ಧಮಾಸೇನ ಸ್ವಪ್ನಃ ಸ್ವಾತ್ಮಫಲಪ್ರದಃ ।
ದರ್ಶಾಹೇ ಫಲದಃ ಸ್ವಪ್ನೋಽಪ್ಯರುಣೋದಯದರ್ಶನೇ ॥

ರಾತ್ರಿಯ ನಾಲ್ಕನೇ ಯಾಮದ ಕನಸಿನ ಫಲವು ಹದಿನೈದು ದಿನಗಳೊಳಗೆ ಅನುಭವಕ್ಕೆ ಬರುತ್ತದೆ. ಅರುಣೋದಯ ಕಾಲದಲ್ಲಿ (ಸೂರ್ಯೋದಯಕ್ಕಿಂತ ಮೊದಲಿನ ನಾಲ್ಕುಗಳಿಗೆ (96 ಮಿನಿಟು) ಕಾಲ ಬಿದ್ದ ಕನಸಿನ ಫಲವು ಹತ್ತು ದಿನಗಳೊಳಗೆ ಅನುಭವಕ್ಕೆ ಬರುತ್ತದೆ.

ಪ್ರಾತಃ ಸ್ವಪ್ನೇಶ್ಚ ಫಲದಸ್ತತ್ಕ್ಷಣಂ ಯದಿ ಬೋಧಿತಃ ।
ದಿನೇ ಮನಸಿ ಯದ್ದೃಷ್ಟಂ ತತ್ಸರ್ವಂ ಚ ಲಭೇದ್ಧ್ರುವಮ್ ॥

ಪ್ರಾತಃಕಾಲ (ಸೂರ್ಯೋದಯದ ನಂತರ ಮೂರು ಗಳಿಗೆ (72 ಮಿನಿಟು) ಕಾಲದಲ್ಲಿ ಕನಸುಬಿದ್ದು, ಕೂಡಲೇ ಎಚ್ಚರವಾದರೆ, ಆ ಕನಸಿನ ಫಲವು ಕೂಡಲೇ ಅನುಭವಕ್ಕೆ ಬರುತ್ತದೆ ಎಂದು ತಿಳಿಯಬೇಕು. ಕನಸಿನಲ್ಲಿ ಮನೋಗತವಾದದ್ದು ಹಗಲಿನಲ್ಲಿ ನಿಶ್ಚಯವಾಗಿ ಅನುಭವಕ್ಕೆ ಬರುತ್ತದೆ.

ಚಿಂತಾವ್ಯಾಧಿಸಮಾಯುಕ್ತೋ ನರಃ ಸ್ವಪ್ನಂ ಚ ಪಶ್ಯತಿ ।
ತತ್ಸರ್ವಂ ನಿಷ್ಫಲಂಚಾತ್ರ ಪ್ರಯಾತ್ಯೇವ ನ ಸಂಶಯಃ ॥

ಮಾನಸಿಕ ಚಿಂತೆಯಿಂದ ಪೀಡಿತನು ಮತ್ತು ರೋಗದಿಂದ ಬಳಲುವ ಮಾನವನು ಕನಸು ಕಂಡರೆ ಆ ಕನಸಿನ ಶುಭಾಶುಭ ಫಲಗಳು ನಿಷ್ಫಲವೆಂದು ತಿಳಿಯಬೇಕು. ಇದರಲ್ಲಿ ಸಂಶಯ ಇಲ್ಲ.

ಜಡೋ ಮೂತ್ರಪುರೀಷೇಣ ಪೀಡಿತಶ್ಚ ಭಯಾಕುಲಃ ।
ದಿಗಂಬರೋ ಮುಕ್ತಕೇಶೋ ನ ಲಭೇತ್ ಸ್ವಪ್ನಜಂ ಫಲಮ್॥

ಮಂದಬುದ್ಧಿಯವನು, ಮೂತ್ರ ಮತ್ತು ಮಲರೋಗದಿಂದ ಪೀಡಿಸಲ್ಪಟ್ಟವನು, ಹೆದರಿಕೆಯಿಂದ ಪೀಡಿತನು, ನಗ್ನನು, ಕೂದಲಿಲ್ಲದವನು ಇವರೆಲ್ಲರಿಗೆ ಕನಸಿನ ಫಲ ಲಭಿಸುವುದಿಲ್ಲ.

ದೃಷ್ಟ್ವಾ ಸ್ವಪ್ನಂ ಚ ನಿದ್ರಾಲುರ್ಯದಿ ನಿದ್ರಾಂ ಪ್ರಯಾತಿ ಚ ।
ವಿಮೂಢೋ ವಕ್ತಿ ಚೇದ್ರಾತ್ರೌ ನ ಲಭೇತ್ ಸ್ವಪ್ನಜಂ ಫಲಮ್ ॥

ಯಾವಾತನು ಕನಸು ಬಿದ್ದ ನಂತರ ಪುನಃ ನಿದ್ದೆ ಮಾಡುತ್ತಾನೋ, ಅಥವಾ ತುಂಬಾ ಹೊತ್ತು ನಿದ್ರಿಸುವವನು ಕನಸು ಕಂಡು ಪುನಃ ನಿದ್ರಿಸುತ್ತಾನೋ, ಆತನಿಗೆ ಸ್ವಪ್ನಫಲ ಲಭಿಸುವುದಿಲ್ಲ. ಅತ್ಯಂತ ಮಂದ ಬುದ್ಧಿಯವನು ಕನಸು ಕಂಡು ಬಡಬಡ ಮಾತಾಡಿದರೆ ಆತನಿಗೆ ಸ್ವಪ್ನಫಲ ಲಭಿಸುವುದಿಲ್ಲ.

ಏಕಸ್ಯಾಮಥ ಚೇದ್ರಾತ್ರೌ ಶುಭಂ ವಾಯದಿ ವಾಽಶುಭಮ್ ।
ಪಶ್ಚಾದ್ ದೃಷ್ಟಸ್ತು ಯಸ್ತತ್ರ ತಸ್ಯ ಪಾಕಂ ವಿನಿರ್ದಿಶೇತ್ ॥

ಒಂದೇ ರಾತ್ರಿಯಲ್ಲಿ ಶುಭ ಅಥವಾ ಅಶುಭ ಕನಸು ಬಿದ್ದರೆ ನಿದ್ರಾವಸಾನದಲ್ಲಿ ಬಿದ್ದ ಕನಸಿನ ಫಲವು ಪ್ರತ್ಯಕ್ಷವಾಗಿ ಕಂಡು ಬರುತ್ತದೆ.

ತಸ್ಮಾತ್ತು ಶೋಭನೇ ಸ್ವಪ್ನೇ ಪಶ್ಚಾತ್ ಸ್ವಪ್ನೋ ನ ಶಸ್ಯತೇ ॥

ಸುಸ್ವಪ್ನ ಕಂಡ ನಂತರ ಕನಸು ಬೀಳಬಾರದು. ಆದುದರಿಂದ ಶುಭಕನಸು ಬಿದ್ದರೆ ನಂತರ ನಿದ್ರೆ ಮಾಡಬಾರದು.

ಮನುಷ್ಯನ ಭಾವೀ ಜೀವನದಲ್ಲಿ ಸಂಭವಿಸುವ ಶುಭಾಶುಭ ಘಟನೆಗಳನ್ನು ಸ್ವಪ್ನವು ಆತನಿಗೆ ಮುಂದಾಗಿ ಸೂಚಿಸುತ್ತದೆ. ಕನಸಿನಲ್ಲಿ ನೋಡಿದ ದೃಶ್ಯಗಳು ಸೂಚಿಸುವ ಫಲವಿಚಾರ ಪ್ರಶ್ನಮಾರ್ಗ ಗ್ರಂಥದ 31ನೇ ಅಧ್ಯಾಯದಲ್ಲಿ ಹೇಳಿರುತ್ತದೆ. ಅವುಗಳ ಮೂಲಶ್ಲೋಕ ಮತ್ತು ತಾತ್ಪರ್ಯವನ್ನು ಮುಂದೆ ವಿವರಿಸಿ ಬರೆದಿರುತ್ತದೆ.

## ಪ್ರಶ್ನಮಾರ್ಗ ಅಧ್ಯಾಯ 31

### ಸ್ವಪ್ನ ಫಲ

ರವಿಭವನೇ ಶಶಿದೃಷ್ಟೇ ರವಿರಾಶಿರ್ಸಪ್ತಮೋ ವಿಲಗ್ನಾದ್ವಾ ।
ಸ್ವಪ್ನೋ ದೃಷ್ಟಃ ಪ್ರವದೇತ್ತ್ರಷ್ಟುರ್ಲಗ್ನಾಂತರಾತ್ಕಾಲಃ ॥೧॥

ಸೂರ್ಯನು ಪ್ರಶ್ನಲಗ್ನದಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟರೆ, ಅಥವಾ ಸೂರ್ಯನ ರಾಶಿಯು (ಸಿಂಹರಾಶಿ) ಸಪ್ತಮಭಾವ (ಕುಂಭಲಗ್ನ) ಆದರೆ ಪ್ರಚ್ಛಕನು ಸ್ವಪ್ನವನ್ನು ನೋಡಿರುತ್ತಾನೆ ಎಂದು ಹೇಳಬೇಕು. ಲಗ್ನದ ಉದಿತ ಭಾಗವು ಲಗ್ನರಾಶಿಯಲ್ಲಿ ಎಷ್ಟು ದಾಟಿರುತ್ತದೆ ಎಂದು ಶೋಧಿಸಿ, ಆ ಅಂತರ ದಿಂದ ಕನಸಿನ ಕಾಲ ತಿಳಿಯಬೇಕು.

ರವಿಲಗ್ನೇ ದೀಪ್ತಾಗ್ನಿಲೋಹಿತವಸನಾದಿದರ್ಶನಂ ಸ್ವಪ್ನೇ ।
ಶಿಶಿರಕಿರಣೇ ತು ನಾರೀಸಿತಕುಸುಮಸ್ವೇತವಸ್ತ್ರಾದಿ ॥೨॥

ಪ್ರಶ್ನಲಗ್ನದಲ್ಲಿ ರವಿ ಇದ್ದರೆ ಪ್ರಚ್ಛಕನು ಕನಸಿನಲ್ಲಿ ಉರಿಯುತ್ತಿರುವ ಬೆಂಕಿಯನ್ನು ಮತ್ತು ಕೆಂಪುಬಣ್ಣದ ವಸ್ತ್ರ ಅಥವಾ ವಸ್ತುಗಳನ್ನು ನೋಡಿರುತ್ತಾನೆ ಎಂದು ಹೇಳಬೇಕು.

ಪ್ರಶ್ನಲಗ್ನದಲ್ಲಿ ಚಂದ್ರನಿದ್ದರೆ ಪ್ರಚ್ಛಕನು ಕನಸಿನಲ್ಲಿ ಹೆಂಗಸರನ್ನು, ಬಿಳಿ ಹೂಗಳನ್ನು ಮತ್ತು ಬಿಳಿವಸ್ತ್ರಾದಿಗಳನ್ನು ನೋಡಿರುತ್ತಾನೆ ಎಂದು ತಿಳಿಯಬೇಕು.

ಭೌಮೇ ಸುವರ್ಣವಿದ್ರುಮರಕ್ತಸ್ರಾವಾದಿ ವಸನಾದಿ ।
ಖೇಗಮನಂ ಶಶಿಪುತ್ರೇ ಜೀವೇ ತದಿಹಬಂಧುಭಿರ್ಯೋಗಃ ॥೩॥

ಪ್ರಶ್ನಲಗ್ನದಲ್ಲಿ ಕುಜನು ಇದ್ದರೆ ಪ್ರಚ್ಛಕನು ಕನಸಿನಲ್ಲಿ ಬಂಗಾರ, ಹವಳ, ರಕ್ತಸ್ರಾವ, ರಕ್ತಸಿಂಚಿತವಸ್ತ್ರ, ಮೊದಲಾದವುಗಳನ್ನು ನೋಡಿರುತ್ತಾನೆ ಎಂದು ತಿಳಿಯಬೇಕು.

ಪ್ರಶ್ನಲಗ್ನದಲ್ಲಿ ಬುಧನು ಇದ್ದರೆ ಪ್ರಚ್ಛಕನು ಕನಸಿನಲ್ಲಿ ಆಕಾಶದಲ್ಲಿ ಸಂಚರಿಸುತ್ತಿದ್ದನೆಂದು ಹೇಳಬೇಕು.

ಪ್ರಶ್ನಲಗ್ನದಲ್ಲಿ ಗುರು ಇದ್ದರೆ ಪ್ರಚ್ಛಕನು ಕನಸಿನಲ್ಲಿ ತನ್ನ ಬಂಧು-ಬಾಂಧವರಿಂದ ಕೂಡಿಕೊಂಡಿದ್ದನು ಎಂದು ತಿಳಿಯಬೇಕು.

ಜಲಸಂತರಣಂ ಶುಕ್ರೇ ತುಙ್ಗಾರೋಹಣಂ ಭವೇತ್ಪತಙ್ಗಸುತೇ ।
ಲಗ್ನಸ್ಥೈರ್ವಕ್ತ್ರವ್ಯಾಮಿಶ್ರೈರ್ಮಿಶ್ರಂ ವದೇತ್ ಸ್ವಪ್ನೇ ॥೪॥

ಪ್ರಶ್ನಲಗ್ನದಲ್ಲಿ ಶುಕ್ರನು ಇದ್ದರೆ ಪ್ರಚ್ಛಕನು ಕನಸಿನಲ್ಲಿ ನೀರಿನಲ್ಲಿ ಈಜಿಕೊಂಡು ಅಥವಾ ದಾಟಿಕೊಂಡು ಹೋಗಿರುತ್ತಾನೆ ಎಂದು ತಿಳಿಯಬೇಕು.

ಪ್ರಶ್ನಲಗ್ನದಲ್ಲಿ ಶನಿ ಇದ್ದರೆ ಪ್ರಚ್ಛಕನು ಕನಸಿನಲ್ಲಿ ಎತ್ತರವಾದ ಸ್ಥಳ ಅಥವಾ ಶಿಖರ ಏರಿದ್ದನೆಂದು ಹೇಳಬೇಕು.

ಪ್ರಶ್ನಲಗ್ನದಲ್ಲಿ ಎರಡು ಅಥವಾ ಹೆಚ್ಚು ಗ್ರಹರಿದ್ದರೆ ಪ್ರಚ್ಛಕನು ಕನಸಿನಲ್ಲಿ ಆ ಗ್ರಹರಿಗೆ ಹೇಳಲ್ಪಟ್ಟಫಲಗಳು ಮಿಶ್ರವಾಗಿಉಳ್ಳ ಸ್ವಪ್ನವನ್ನು ನೋಡಿರುತ್ತಾನೆ ಎಂದು ತಿಳಿಯಬೇಕು.

ರಿಪುನೀಚಕ್ಷೇತ್ರೋಪಗತೈ ದುಃಸ್ವಪ್ನಂ ನಿರ್ದಿಶೇದ್ಗ್ರಹೈರ್ವೇತಿ ।
ರವಿಕಿರಣ ಮುಷ್ಟಕಿರಣೇ ಪೃಷ್ಟುಃ ಸ್ವಪ್ನಂ ವದೇತ್ಭಗ್ನವರ್ ॥

ಪ್ರಶ್ನಲಗ್ನದಲ್ಲಿರುವ ಗ್ರಹನು ತನ್ನನೀಚ ಅಥವಾ ಶತ್ರು ರಾಶಿಯಲ್ಲಿ ಇದ್ದರೆ, ಪ್ರಚ್ಛಕನು ನೋಡಿದ ಸ್ವಪ್ನವು ಕೆಡುಕಿನದ್ದು (ದುಃಸ್ವಪ್ನ) ಎಂದು ತಿಳಿಯಬೇಕು.

ಪ್ರಶ್ನಲಗ್ನದಲ್ಲಿರುವ ಗ್ರಹನು ಅಸ್ತನಾಗಿದ್ದರೆ ಪ್ರಚ್ಛಕನಿಗೆ ಬಿದ್ದ ಕನಸು ಪೂರ್ತಿಯಾಗದೆ ನಡುವಿನಲ್ಲಿಯೇ ಭಗ್ನವಾಗಿರುತ್ತದೆ ಎಂದು ತಿಳಿಯಬೇಕು.

ಮೇಷೇ ದೇವಗೃಹೇಕ್ಷಣಂ ಗವಿ ಪುನರ್ದೇವಸ್ಯ ವೀಕ್ಷ್ಮಾಯುಮೇ ।
ದೃಷ್ಟ್ವಾತ್ರ ವಿಪ್ರತಪಸ್ವಿನೋಽಥ ಶಶಿಭೇ ದೃಷ್ಟಂ ಸಸಸ್ಯಂ ಪಯಃ ॥
ಕ್ಷೇತ್ರಾಪ್ರದಾನಯನಂ ತೃಣಸ್ಯ ರವಿಭೇ ಸ್ವಪ್ನೇ ಕಿರಾತೇಕ್ಷಣಮ್ ।
ಯುದ್ಧಾತ್ತ ಸೈರಿಭದರ್ಶನಂ ಯುವತಿಭಿಃ ಕನ್ಯೋದಯೇ ಸಙ್ಗಮಃ ॥
ಜೂಕೇ ಲಗ್ನಗತೇ ವಣಿಂಗ್ ನರಪತಿಸ್ವರ್ಣೇಕ್ಷಣಂ ವೃಶ್ಚಿಕೇ ।
ಪಶ್ಯೇದ್ಭೃಙ್ಗವಿಷಾಸ್ತ್ರಾಪಾದಿಧನುಷಿ ತ್ವಗ್ನ್ಯಾರ್ತವಂ ವಾ ಫಲಮ್॥
ನಕ್ರೇ ಸ್ತ್ರೀಪುರುಷೌ ಘಟೇ ತು ಮುಕುರಂ ಮೀನೇಽಂಬುಧಿಂ
ಹೇಮ ವಾ । ಛತ್ರಾರೂಢವಿಲಗ್ನಗೈಶ್ಚ ಸುಖಗೈಃ ಸ್ವಪ್ನಂ ವದೇ-
ತ್ತೇಚರೈಃ ॥೯॥

ಪ್ರಶ್ನಲಗ್ನರಾಶಿ ಫಲಃ-ಮೇಷಾದಿ ರಾಶಿಯು ಪ್ರಶ್ನಲಗ್ನ ಆದಾಗ ಪ್ರಚ್ಛಕನು ನೋಡಿದ ಸ್ವಪ್ನಫಲವನ್ನು ಕ್ರಮವಾಗಿ ಹೇಳುತ್ತಾನೆ. ಪ್ರಶ್ನಲಗ್ನವು ಮೇಷರಾಶಿ

–ಆದಾಗ ಕನಸಿನಲ್ಲಿ ದೇವಸ್ಥಾನವನ್ನು ನೋಡಿರುತ್ತಾನೆ. ವೃಷಭ–ದೇವರು, ಮಿಥುನ–ಬ್ರಾಹ್ಮಣ ಅಥವಾ ತಪಸ್ವಿಗಳು, ಕರ್ಕಟಿಕ–ಫಲ, ಪೈರು, ಬತ್ತದ ಗೊಂಚಲು ಇತ್ಯಾದಿ ಮತ್ತು ನೀರು, ಅಥವಾ ಜಲಶ್ರಯ, ಗದ್ದೆಯಿಂದ ಹುಲ್ಲನ್ನು ತರುವುದು, ಸಿಂಹ–ಕಿರಾತ ಅಥವಾ ಕೋಣ, ಕನ್ಯಾ–ಸ್ತ್ರೀಯೊಂದಿಗೆ ಕೂಡುವುದು, ತುಲಾ–ವ್ಯಾಪಾರಿ, ಅರಸ, ಬಂಗಾರ, ವೃಶ್ಚಿಕ–ದುಂಬಿ, ವಿಷ, ವಿಷದ ಹೂಗಳು, ಧನು–ತೊಗಟೆ, ಫಲ, ಪುಷ್ಪ, ಮಕರ–ಸ್ತ್ರೀ, ಪುರುಷ, ಕುಂಭ–ಕನ್ನಡಿ, ಮೀನ–ಸಮುದ್ರ ಅಥವಾ ಬಂಗಾರ ಈ ರೀತಿ ಪ್ರಶ್ನಲಗ್ನ ರಾಶಿಯಿಂದ ಕನಸಿನಲ್ಲಿ ನೋಡಿದ ವಸ್ತು ವಿಚಾರ ಚಿಂತಿಸಬೇಕು. ಈ ಫಲಗಳನ್ನು ಪ್ರಶ್ನಕಾಲದ ಛತ್ರರಾಶಿ, ಆರೂಢಲಗ್ನ ಮತ್ತು ಚತುರ್ಥಭಾವದಿಂದಲೂ ಚಿಂತಿಸಬೇಕು.

## ಅಷ್ಟಾಙ್ಗಹೃದಯ ಗ್ರಂಥ ಮತ

ಸ್ವಪ್ನೇ ಮದ್ಯಸಹಪ್ರೇತೈಃ ಪ್ರಪಿಬತೇ ಕೃಷ್ಯತೇ ಶುನಾ ।
ಸ ಮರ್ತ್ಯೋ ಮೃತ್ಯುನಃ ಶೀಘ್ರಂ ಜ್ವರರೂಪೇಣ ನೀಯತೇ॥೧೦॥

ಯಾವಾತನು ಕನಸಿನಲ್ಲಿ ಪ್ರೇತಗಳೊಡನೆ ಮದ್ಯಪಾನ ಮಾಡುತ್ತಾ ನಾಯಿಗಳಿಂದ ಸೆಳೆಯಲ್ಪಡುತ್ತಾನೋ ಆತನು ಶೀಘ್ರದಲ್ಲಿಯೇ ಜ್ವರದಿಂದ ಪೀಡಿಸಲ್ಪಟ್ಟವನಾಗಿ ಮರಣ ಹೊಂದುತ್ತಾನೆ.

ರಕ್ತಮಾಲ್ಯವಪುರ್ವಸ್ತ್ರೋ ಯೋ ಹಸನ್ ಹ್ರಿಯತೇ ಸ್ತ್ರಿಯಃ ।
ಸೋಽಸ್ತ್ರ ಪಿತ್ತೇನ ಮಹಿಷಶ್ವವರಾಹೋಷ್ಟ್ರಗರ್ದಭೈಃ ॥೧೧॥ ಯಃ
ಪ್ರಯಾತಿ ದಿಶಂ ಯಾಮ್ಯಂ ಮರಣಂ ತಸ್ಯ ಲಕ್ಷಣಂ ।

ಯಾವಾತನು ಕನಸಿನಲ್ಲಿ ಕೆಂಪುವಸ್ತ್ರ, ಕೆಂಪುಮಾಲೆ ಧರಿಸಿಕೊಂಡು ನಗಾಡುತ್ತಾ ಹೆಣ್ಣಿನಿಂದ ಸೆಳೆಯಲ್ಪಡುತ್ತಾನೋ, ಆತನು ಪಿತ್ತದಿಂದ ಪೀಡಿಸಲ್ಪಡುತ್ತಾನೆ.

ಯಾವಾತನು ಕನಸಿನಲ್ಲಿ ಕೋಣ, ನಾಯಿ, ಹಂದಿ, ಒಂಟೆ, ಕತ್ತೆ ಇವುಗಳೊಡನೆ ದಕ್ಷಿಣದಿಕ್ಕಿಗೆ ಹೋಗುತ್ತಾನೋ ಆತನಿಗೆ ಇದು ಮರಣ ಸೂಚಕ ಲಕ್ಷಣ ಆಗಿರುತ್ತದೆ.

ಲತಾ ಕುಂಡಲೀನಿವಂಶತಾಲೋ ವಾ ಹೃದಿಜಾಯತೇ ॥೧೨॥
- ಯಸ್ಯೈತಸ್ಯಾಸು ಗುಲ್ಮೇನ ಯಸ್ಯವಾಗ್ನಿರ್ಮನರ್ಚಿತಾ ಜಿವ್ಹ ತೋ-
ಗ್ರಹಸಿಕ್ತೈಶ್ಚ ನಗ್ನಸ್ಯೋತ್ಕಿಜಾಯತೇ । ಪದ್ಮಾಂನಸ್ಯೇತ್
ಕುಷ್ಠೇನ ಚಂಡಾಲೈಃ ಸ ಯಃ ಪಿಬೇತ್ ನೇಹಂ ಬಹುವಿಧಂ
ಸ್ವಪ್ನೇ ಸಪ್ರಮೇಹೇನನಶ್ಯತೀ ॥೧೩॥

ಕನಸಿನಲ್ಲಿ ಯಾವಾತನ ಹೃದಯದಲ್ಲಿ ಬಳ್ಳಿ, ಪೊದರು, ಅಥವಾ ಗೆಲ್ಲು ಗಳು, ಬಿದಿರು, ತಾಳೆ ಉದ್ಭವಿಸುತ್ತದೋ ಅಂಥವನು ಗುಲ್ಮರೋಗದಿಂದ ಪೀಡಿಸಲ್ಪಡುತ್ತಾನೆ.

ಯಾವಾತನು ಸ್ವಪ್ನದಲ್ಲಿ ಹೋಮ ಮಾಡುತ್ತಾ ಉರಿಯುತ್ತಿರುವ ಬೆಂಕಿ ಯಲ್ಲಿ ಆಹುತಿಯನ್ನು ಕೊಡುತ್ತಾನೋ, ನಗ್ನನಾಗಿದ್ದು ತುಪ್ಪದಿಂದ ತೋಯಿ ಸಲ್ಪಟ್ಟ ಹೊಗೆಯಂತಿರುವ ಆಹುತಿಯನ್ನು ಕೊಡುತ್ತಾನೋ, ಎದೆಯಲ್ಲಿರು ವಂಥ ಕಮಲ ಅಥವಾ ಕಮಲ ಉದ್ಭವಿಸಿ ನಾಶವಾಗುತ್ತಿರುವುದು ಸ್ವಪ್ನದಲ್ಲಿ ಕಂಡು ಬಂದರೆ ಆತನು ಕುಷ್ಠರೋಗದಿಂದ ಪೀಡಿಸಲ್ಪಡುತ್ತಾನೆ.

ಯಾವಾತನು ಸ್ವಪ್ನದಲ್ಲಿ ಚಂಡಾಲರೊಡನೆ ಕುಡಿಯುವುದು (ಮದ್ಯ ಇತ್ಯಾದಿ) ನೋಡಿದರೆ ಅಂಥವನು ಮೇಹರೋಗದಿಂದ ಪೀಡಿಸಲ್ಪಟ್ಟು ನಾಶ ಹೊಂದುತ್ತಾನೆ.

ಉನ್ಮಾದೇನ ಜಲೇ ಮಜ್ಜೇದ್ಯೋನೃತ್ಯಂ ರಾಕ್ಷಸೈಃ ಸಹ । ಅಪ-
ಸ್ಮಾರೇಣ ಯೋ ಮೃತ್ಯುಃ ನೃತ್ಯನ್ ಪ್ರೇತೇನ ನೀಯತೇ ॥೧೪॥

ಯಾವಾತನು ಸ್ವಪ್ನದಲ್ಲಿ ನೀರಿನಲ್ಲಿ ಮುಳುಗುತ್ತಾನೋ ಆತನು ಉನ್ಮಾದ ದಿಂದ ಮರಣ ಹೊಂದುತ್ತಾನೆ. ಯಾವಾತನು ಕನಸಿನಲ್ಲಿ ರಾಕ್ಷಸರೊಂದಿಗೆ ಕುಣಿಯುತ್ತಾನೋ ಅಥವಾ ಪ್ರೇತಗಳಿಂದ ಒಯ್ಯಲ್ಪಡುತ್ತಾನೋ ಆತನು ಅಪ ಸ್ಮಾರದಿಂದ ಪೀಡಿಸಲ್ಪಡುತ್ತಾನೆ.

ಯಾನಂ ಖರೋಷ್ಟ್ರಮಾರ್ಜಾರಕಪಿಶಾರ್ದೂಲಸೂಕರೈಃ । ಯಸ್ಯ
ಪ್ರೇತೈಃಶೃಗಾಲೈರ್ವಾ ಸ ಮೃತ್ಯೋರ್ವರ್ತತೇ ಮುಖೇಃ ॥೧೫॥

ಯಾವಾತನು ಕನಸಿನಲ್ಲಿ ಕತ್ತೆ, ಒಂಟೆ, ಬೆಕ್ಕು, ಮಂಗ, ಹುಲಿ ಇವುಗ ಳೊಡನೆ, ಪ್ರೇತದೊಂದಿಗೆ ಅಥವಾ ನರಿಗಳೊಂದಿಗೆ ಸಂಚರಿಸುತ್ತಾನೋ ಆತನು ಮೃತ್ಯುವಿನ ಬಾಯಿಯಲ್ಲಿ ಇದ್ದಾನೆ ಎಂದು ತಿಳಿಯಬೇಕು.

**ಅಪೂಪಶಷ್ಕುಲೀರ್ಜಗ್ಧ್ವಾ ವಿಬುದ್ಧಶ್ಚದ್ವಿದೋವಮನ್ ।**
**ನ ಜೀವತ್ಯಾಕ್ಷಿರೋಗಾಯ ಸೂರ್ಯೇಂದುಗ್ರಹಣೇಕ್ಷಣಂ ॥೧೬॥**

ಯಾವಾತನು ಕನಸಿನಲ್ಲಿ ಅಪ್ಪ, ಚಕ್ಕುಲಿ ಇವುಗಳನ್ನು ಜಗಿದು ತಿಂದು ಎಚ್ಚರಗೊಂಡವನಾಗಿ ಕಾರುತ್ತಾನೋ ಆತನು ಬದುಕುವುದಿಲ್ಲ ಎಂದು ತಿಳಿಯಬೇಕು. ಯಾವಾತನು ಕನಸಿನಲ್ಲಿ ಸೂರ್ಯ-ಚಂದ್ರರ ಗ್ರಹಣವನ್ನು ನೋಡುತ್ತಾನೋ ಆತನಿಗೆ ಕಣ್ಣುರೋಗ ಉಂಟಾಗುತ್ತದೆ.

**ಸೂರ್ಯಾಚಂದ್ರಮಸೋಃಪಾತ ದರ್ಶನಂ ದೃಗ್ವಿನಾಶನಂ ।**
**ಮೂರ್ಧ್ನಿವಂಶಲತಾದೀನಾಂ ಸಂಭವೋ ವಯಸಾಂತಥಾ ॥೧೭॥**

ಯಾವಾತನು ಕನಸಿನಲ್ಲಿ ಸೂರ್ಯ-ಚಂದ್ರರ ಪತನವನ್ನು ನೋಡುತ್ತಾನೋ ತನ್ನ ಕಣ್ಣು ಹೋದಂತೆ ತಿಳಿಯುತ್ತಾನೋ ಯಾವಾತನ ತಲೆಯಲ್ಲಿ ಬಿದಿರು, ಬಳ್ಳಿ ಇವುಗಳೆಲ್ಲಾ ಬೆಳೆಯುತ್ತವೋ, ಯಾವಾತನ ತಲೆಯಲ್ಲಿ ಹಕ್ಕಿಗಳು ಗೂಡು ಕಟ್ಟುತ್ತವೋ, ಆತನಿಗೆ ಯಾವುದಾದರೂ ಕೆಟ್ಟಫಲ ಅಥವಾ ಮರಣ ಸಂಭವಿಸಬಹುದು.

**ನಿಲಯೋ ಮುಂಡತಾಕಾಕಗೃಧ್ರಾದ್ಯೈಃ ಪರಿವಾರಣಮಂ ತಥಾ-**
**ಪ್ರೇತಪಿಶಾಚಸ್ತ್ರೀಂದ್ರವಿಷಾಂಫ್ರು ಗವಾಶನ್ಯೈಃ ॥೧೮॥**

ಕನಸಿನಲ್ಲಿ ಯಾವಾತನಿಗೆ ತನ್ನ ತಲೆ ಬೋಳಿಸಿದಂತೆ ಕಂಡುಬರುತ್ತದೋ, ಕಾಗೆ, ಹದ್ದು ಇವೇ ಮೊದಲಾದವುಗಳಿಂದ ಸುತ್ತುವರಿಯಲ್ಪಡುತ್ತಾನೋ, ಪ್ರೇತ, ಪಿಶಾಚ, ಪಶುಭಕ್ಷಕ ಪ್ರಾಣಿಗಳಿಂದ ಕೂಡಲ್ಪಟ್ಟರೆ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

**ಸಂಗೋಽವೇತ್ರ ಲತಾವಂಶಾತ್ಯಣಕಂಟಕಸಂಕಟೇ ।**
**ಶ್ವಭ್ರಶ್ಮಶಾನಶಯನಂ ಪತನಂಪಾಂಸು ಭಸ್ಮನೋಃ ॥೧೯॥**

ಕನಸಿನಲ್ಲಿ ಯಾವಾತನು ಬೆತ್ತದ ಹಿಂಡುಗಳಲ್ಲಿ, ಬಳ್ಳಿಯ ನಡುವಿನಲ್ಲಿ, ಬಿದಿರುಗಳ ಹಿಂಡಿನಲ್ಲಿ, ಹುಲ್ಲು-ಮುಳ್ಳುಗಳ ನಡುವಿನಲ್ಲಿ ಸಿಕ್ಕಿಕೊಳ್ಳುತ್ತಾನೋ ಅಥವಾ ಮೂಟೆಯಲ್ಲಿ, ಶ್ಮಶಾನದಲ್ಲಿ ಮಲಗುತ್ತಾನೋ, ಧೂಳಿನಲ್ಲಿ ಅಥವಾ ಬೂದಿಯಲ್ಲಿ ಬೀಳುತ್ತಾನೋ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

ಮಜ್ಜನಂ ಜಲಪಂಕಾದ್ಯೈಃ ಶೀಘ್ರೇಣಸೋಥಸಾಹ್ಯತಿಃ ।
ನೃತ್ತವಾದಿತ್ರಗೀತಾನಿ ರಕ್ತಸ್ರಗ್ವಸ್ತ್ರಧಾರಣಮ್ ॥೨೦॥

ಕನಸಿನಲ್ಲಿ ಯಾವಾತನು ನೀರಿನಲ್ಲಿ ಅಥವಾ ಕೆಸರು ನೀರಿನಲ್ಲಿ ಮುಳುಗಿ ಏಳುತ್ತಾನೋ. ನೀರಿನ ಪ್ರವಾಹದಲ್ಲಿ ಸೆಳೆಯಲ್ಪಡುತ್ತಾನೋ, ಕುಣಿಯುವುದು, ವಾದ್ಯಳೆ ಇತ್ಯಾದಿ ಬಾರಿಸುವುದು. ಪದ ಹೇಳುವುದು. ರಕ್ತವರ್ಣದ ಮಾಲೆ ಅಥವಾ ರಕ್ತವರ್ಣದ ವಸ್ತ್ರ ಧರಿಸುವುದು. ಆತನಿಗೆ ಕೇಡು ಸಂಭವಿಸುತ್ತದೆ. ಎಂದು ತಿಳಿಯಬೇಕು.

ವಾನರಾಂಗ ವೃದ್ಧಿರಭ್ಯಂಗೋ ವಿವಾಹಃ ಶ್ಮಶ್ರುಕರ್ಮ ಚ ।
ಪಾಪಾನ್ನಸ್ನೇಹಮದ್ಯಾಶ್ಯಃ ಪ್ರುಚ್ಛರ್ದನಂವಿರೇಚನಮ್ ॥೨೧॥

ಕನಸಿನಲ್ಲಿ ಯಾವಾತನ ದೇಹದ ಎಡಬದಿಯು ಉಬ್ಬಿದಂತೆ ಕಾಣಿಸುವುದು, ವಿವಾಹ ಮಾಡಿಕೊಳ್ಳುವುದು. ಗಡ್ಡ ತೆಗೆಯುವುದು. ಕೆಟ್ಟ ಆಹಾರ. ಎಣ್ಣೆ, ಹೆಂಡ ಇವುಗಳನ್ನು ಸೇವಿಸಿ ಕಾರುತ್ತಾ. ಉಗುಳುತ್ತಾ ಇದ್ದರೆ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

ಹಿರಣ್ಯಲೋಹಯೋರ್ಲಾಭಃ ಕಲಿರ್ಬಂಧಪರಾಜಯೌ ।
ಉಪದ್ಯುಗನಾಶಸ್ಯ ಪ್ರಪಾತಃ ಪಾದಚರ್ಮಣೌ ॥೨೨॥

ಕನಸಿನಲ್ಲಿ ಯಾವಾತನಿಗೆ ಬಂಗಾರ ಅಥವಾ ಕಬ್ಬಿಣ ಲಾಭ ಆಗುತ್ತದೋ, ಕನಸಿನಲ್ಲಿ ಯಾವಾತನು ಬೇರೆಯವರೊಡನೆ ಜಗಳ ಮಾಡುತ್ತಾನೋ, ಜಗಳದಲ್ಲಿ ಸೋಲುತ್ತಾನೋ, ಕಾಲಿನಲ್ಲಿ ಧರಿಸಿದ ಮೆಟ್ಟುಗಳು ಜಾರಿ ಬೀಳುತ್ತದೋ ಅಥವಾ ಕಾಣೆಯಾಗುತ್ತದೋ ಅಥವಾ ಪಾದಗಳ ಚರ್ಮಗಳು ಉದುರಿ ಹೋಗುತ್ತದೋ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

ಹರ್ಷೋಽಭೀಶಂ ಚ ಕುಪಿತೈಃ ಪಿತೃಭಿಃಶ್ಚಾವಭರ್ತ್ಸನಮ್ ।
ಪ್ರದೀಪಗೃಹನಕ್ಷತ್ರ ದಂತದೈವತ ಚಕ್ಷುಷಾಮ್ ॥೨೩॥
ಪತನಂ ವಾ ವಿನಾಶೋಽವಾ ಭೇದನಂ ಪರ್ವತಸ್ಯ ವಾ ।
ಕಾನನೇ ರಕ್ತಕುಸುಮೋ ಪಾಪಕರ್ಮ ನಿವೇಶನಂ ॥೨೪॥

ಯಾವಾತನು ಕನಸಿನಲ್ಲಿ ಬೇರೆಯವರು ಸಿಟ್ಟುಗೊಂಡು ಎದುರು ನಿಂತಿರುವಾಗ ಸಂತೋಷದಿಂದ ನಗೆಯುತ್ತಾನೋ. ಪಿತೃಗಳ ಗುಂಪಿನಲ್ಲಿ ಇರುತ್ತಾನೋ, ಉರಿಯುತ್ತಿರುವ ದೀಪ. ಮನೆ. ನಕ್ಷತ್ರ . ಹಲ್ಲು. ದೇವರು ಮತ್ತು ಕಣ್ಣುಗಳು

ಬಿದ್ದಂತೆ ಕನಸಿನಲ್ಲಿ ನೋಡುತ್ತಾನೋ. ಅಥವಾ ಅವುಗಳ ನಾಶವಾದಂತೆ ಕಾಣುತ್ತಾನೋ, ಕನಸಿನಲ್ಲಿ ಪರ್ವತವು ಸೀಳಿಹೋಗುವುದು ಅಥವಾ ಬಿದ್ದುಹೋಗುವುದು, ಕಾಡಿನಲ್ಲಿ ಕೆಂಪು ಹೂಗಳನ್ನು ಇಟ್ಟುಕೊಂಡು ಅನುಚಿತವಾದ ಕಾರ್ಯಗಳನ್ನು ಮಾಡುವುದು ಕಂಡುಬಂದರೆ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

**ಚಿತಾಂಧಕಾರ ಸಂಬಾಧ ಜನನ್ಯಾಂಚಪ್ರವೇಶನಂ ।**
**ಪಾತಃ ಪ್ರಾಸಾದಶೈಲಾದೇರ್ಮತ್ಸ್ಯೇನ ಗ್ರಹಣಂ ತಥಾ ॥೨೫॥**

ಯಾವಾತನು ಕನಸಿನಲ್ಲಿ ಚಿತೆಯಲ್ಲಿಟ್ಟು ಸುಟ್ಟಂತೆ, ತಾನು ಘೋರಕತ್ತಲೆಯಲ್ಲಿ ಸಿಲುಕಿದಂತೆ, ತನ್ನ ತಾಯಿಯ ಉದರದಲ್ಲಿ ಪ್ರವೇಶ ಮಾಡಿದಂತೆ, ಉಪ್ಪರಿಗೆಯಿಂದ ಅಥವಾ ಪರ್ವತದ ತುದಿಯಿಂದ ಕೆಳಗೆ ಬಿದ್ದಂತೆ ಅಥವಾ ನೂಕಿದಂತೆ. ಅಥವಾ ತನ್ನನ್ನು ಮೀನು ಹಿಡಿದಂತೆ ಕಾಣುತ್ತಾನೋ ಆತನಿಗೆ ಕೇಡು ಸಂಭವಿಸುತ್ತದೆ ಎಂದು ತಿಳಿಯಬೇಕು.

**ಕಾಷಾಯಿಣಾಂ ಅಸೌಮ್ಯಾನಾಂ ನಗ್ನಾನಾಂಗಂಡಧಾರಿಣಾಮ್ ।**
**ರಕ್ತಾಕ್ಷಾಂಚ ಕೃಷ್ಣಾನಾಂ ದರ್ಶನಂಜಾತು ನೇಶ್ಯತೆ ॥೨೬॥**

ಕನಸಿನಲ್ಲಿ ಯಾವಾತನು ಕಾವಿವಸ್ತ್ರವನ್ನು ಉಟ್ಟವನನ್ನು, ಪಾಪಾತ್ಮರನ್ನು, ದಿಗಂಬರರನ್ನು, ಘಂಟೆ ಹಿಡಿದು ಕೊಂಡವರನ್ನು, ಕೆಂಪುಕಣ್ಣು ಉಳ್ಳವರನ್ನು, ಕಪ್ಪಾಗಿರುವವರನ್ನು ನೋಡುತ್ತಾನೋ ಆತನಿಗೆ ಕೇಡು ಅಥವಾ ನಾಶ ಸಂಭವಿಸುತ್ತದೆ ಎಂದು ತಿಳಿಯಬೇಕು.

**ಕೃಷ್ಣಾ ಪಾಪಾನನಾಚಾರ ದೀರ್ಘಕೇಶನಖಸ್ತನೀ ।**
**ವಿಲಾಸಮಾಲ್ಯವಸನಃ ಸ್ವಪ್ನೇಕಾಲನಿಶಾಮತಃ ॥೨೭॥**

ಯಾವ ಹೆಣ್ಣು ಕಪ್ಪಾಗಿ, ಸೊಟ್ಟ ಮುಖ ಉಳ್ಳವಳು, ಅನಾಚಾರ ಮಾಡುವವಳು, ಉದ್ದವಾದ ತಲೆಕೂದಲು, ಉಗುರು ಮತ್ತು ಮೊಲೆಉಳ್ಳವಳು, ಬಣ್ಣವಿಲ್ಲದ ಮಾಲೆ ಮತ್ತು ವಸ್ತ್ರಧರಿಸಿದವಳು, ಇಂಥಹ ಸ್ತ್ರೀ ಕನಸಿನಲ್ಲಿ ಕಂಡುಬಂದರೆ ಅವಳಿಗೆ ಕಾಳರಾತ್ರಿ ಎಂದು ಹೇಳುತ್ತಾರೆ.

**ದೃಶ್ಯತೇ ದಾರುಣಾಃ ಸ್ವಪ್ನಾಃ ರೋಗೀಯೈರ್ಯಾತಿ ಪಂಚತಾಂ ।**
**ತಾರೋಗಾ ಸಂಶಯಂ ಪ್ರಾಪ್ಯಾ ಕಶ್ಚಿದೇವ ವಿಮುಚ್ಯತೇ ॥೨೮॥**

ರೋಗಿಯು ಕನಸಿನಲ್ಲಿ ಹಿಂದಿನ ಶ್ಲೋಕದಲ್ಲಿ ಹೇಳಿದ ಕಾಳರಾತ್ರಿ ಇತ್ಯಾದಿಗಳನ್ನು ಕಂಡರೆ ಆತನಿಗೆ ಆ ಸ್ವಪ್ನವು ಮರಣ ಸೂಚಕ ಆಗಿರುತ್ತದೆ. ಅಥವಾ ಆತನ ರೋಗವು ಗುಣಪಡಿಸಲು ಅಸಾಧ್ಯ ಆದ್ದದ್ದು ಎಂದು ತಿಳಿಯಬೇಕು.

**ದೃಷ್ಟಃ ಶ್ರುತಾನುಭೂತಶ್ಚ ಪ್ರಾರ್ಥಿತಃ ಕಲ್ಪಿತಸ್ತಥಾ ।**
**ಭಾವಿಕೋ ದೋಷಜಶ್ಚೇತಿ ಸ್ವಪ್ನಃ ಸಪ್ತವಿಧೋ ಮತಃ ॥೨೯॥**

ದೃಷ್ಟ, ಶ್ರುತ, ಅನುಭೂತ, ಪ್ರಾರ್ಥಿತ, ಕಲ್ಪಿತ, ಭಾವಿಜ, ಮತ್ತು ದೋಷಜ ಎಂದು ಸ್ವಪ್ನಗಳನ್ನು ಏಳು ವಿಭಾಗ ಮಾಡಿರುತ್ತಾರೆ.

**ತೇಷ್ವಾದ್ಯಾ ನಿಷ್ಫಲಾಃ ಪಂಚಯಥಾ ಸ್ವಪ್ರಕೃತಿರ್ದಿವಾ ।**
**ವಿಸ್ಮೃತೋ ದೀರ್ಘಹ್ರಸ್ವೋತಿ ಪೂರ್ವರಾತ್ರೇ ಚ ಚಿರಾತ್ಫಲಂ ॥**
**ದೃಷ್ಟಂ ಕರೋತಿ ಪ್ರಚ್ಛಂವಾ ಗೋಸರ್ಗೇ ತದಹಃ ಮಹತ್ ।**
**ನಿದ್ರಾಯಾಚಾನುಪಾತಃ ಪ್ರತೀಪೈರ್ವಚನೈಸ್ತಥಾ ॥೩೦॥**

ಹಿಂದೆ ಹೇಳಿದ ಏಳು ವಿಧದ ಕನಸುಗಳಲ್ಲಿ ಮೊದಲಿನ ಐದು ವಿಧದ ಕನಸುಗಳು ಆತನ ಸ್ವಭಾವಕ್ಕೆ ಸರಿಯಾಗಿ ಉಂಟಾಗುತ್ತವೆ. ಹಗಲಿನಲ್ಲಿ ಬಿದ್ದ ಕನಸಿನಲ್ಲಿಯೂ ಫಲವು ಕಂಡು ಬರುವುದಿಲ್ಲ. ಕನಸಿನಲ್ಲಿ ನೋಡಲ್ಪಟ್ಟದ್ದು ಎಚ್ಚರವಾದ ನಂತರ ಮರೆತು ಹೋದರೆ ಅದು ನಿರರ್ಥಕ ಕನಸು ಆಗುತ್ತದೆ. ಕನಸು ಅತೀ ಉದ್ದವಾಗಲೀ ಅತೀ ಗಿಡ್ಡವಾಗಲೀ ಇದ್ದರೆ ಅದು ಕೂಡಾ ಫಲವನ್ನು ನೀಡುವುದಿಲ್ಲ. ರಾತ್ರಿಯ ಪೂರ್ವಭಾಗದಲ್ಲಿ ಕನಸು ಕಂಡರೆ ಅದು ಬಹುಕಾಲದ ನಂತರ ಫಲವನ್ನು ಕೊಡುತ್ತದೆ. ಅಥವಾ ಅದರ ಫಲವು ಅಲ್ಪವಾಗಿ ಸಂಭವಿಸುತ್ತದೆ. ಬೆಳಗಿನ ಜಾವದಲ್ಲಿ ಬಿದ್ದ ಕನಸು ಫಲಪ್ರದ ಆಗಿರುತ್ತದೆ. ಆ ಕನಸು ಮಹತ್ವವುಳ್ಳದ್ದು ಫಲಕಾರಿಯೂ ಆಗಿರುತ್ತದೆ. ಕನಸು ಕಂಡವನು ಮೊದಲು ನಿದ್ದೆಯನ್ನು ಬಿಟ್ಟವನಾಗಿರಬಾರದು. ಅಥವಾ ನಿದ್ದೆಮಾಡುವುದಕ್ಕೆ ಮೊದಲು ಯಾರಾದರೂ ಆತನ ಮನಸ್ಸು ನೋಯಿಸುವಂಥಹ ಮಾತುಗಳನ್ನು ಆಡಿರಬಾರದು. ಆದ್ದರಿಂದ ಸ್ವಸ್ಥಚಿತ್ತನಾಗಿ ಸಮಾಧಾನದಿಂದ ಮಲಗಿದವನಿಗೆ ಕನಸಾದರೆ, ಆ ಕನಸು ಮಾತ್ರ ಫಲಪ್ರದ ಆಗಿರುತ್ತದೆ.

**ಯಾತಿಪಾಪೋಲ್ಪಫಲತಾಂ ದಾನಹೋಮಜಪಾದಿಭಿಃ ।**
**ಅಕಲ್ಯಾಣ ಮಪಿಸ್ವಪ್ನಂ ದೃಷ್ಟ್ವಾ ತತ್ರೈವ ತತ್ಪುನಃ ॥೩೧॥**
**ಪಶ್ಯೇತ್ ಸೌಮ್ಯಂ ಜಪೇತ್ತಸ್ಯ ಶುಭಮೇವಫಲಂ ಭವೇತ್ ॥**

ಅಶುಭ ಕನಸು ನೋಡಿದವನು, ಬಲ್ಲವರು ಹೇಳಿದ ದಾನ, ಹೋಮ, ಜಪ ಇತ್ಯಾದಿಗಳಿಂದ ದುಃಸ್ವಪ್ನಫಲ ನಿವೃತ್ತಿ ಮಾಡಬೇಕು. ಇದರಿಂದ ಆ ಕನಸಿನ ಅಶುಭಫಲಗಳು ಅಲ್ಪವಾಗಿ ಹೋಗುತ್ತದೆ. ದುಃಸ್ವಪ್ನ ನೋಡಿ ಎಚ್ಚರಗೊಂಡವನು ದೇವರನ್ನು ಸ್ತುತಿಸಿ ಪುನಃ ನಿದ್ರಿಸಿದರೆ, ಅನಂತರ ಆತನಿಗೆ ಶುಭ ಕನಸು ಬಿದ್ದರೆ, ಮೊದಲು ಬಿದ್ದ ಕೆಟ್ಟ ಕನಸಿನ ಫಲವು ನಾಶವಾಗಿ ನಂತರ ನೋಡಿದ ಶುಭ ಕನಸಿನ ಫಲ ಸಂಭವಿಸುತ್ತದೆ.

## ಸುಸ್ವಪ್ನ

**ದೇವಾನ್ದ್ವಿಜಾನ್ಗೋವೃಷಭಾನ್ ಜೀವಿತಸ್ಸುಹೃದೋ ನೃಪಾನ್ ।**
**ಸಾಧೂನ್ಯಶಸ್ವಿನೋ ವಹ್ನಿಮಿದ್ಧಂ ಸ್ವಚ್ಛಂ ಜಲಾಶಯಾನ್ ॥೩೪॥**

ಯಾವಾತನು ಕನಸಿನಲ್ಲಿ ದೇವರನ್ನು, ಬ್ರಾಹ್ಮಣರನ್ನು, ಗೋವುಗಳನ್ನು, ಹೋರಿಗಳನ್ನು, ಬದುಕಿರುವ ಮಿತ್ರನನ್ನು, ರಾಜನನ್ನು, ಸಾಧುಗಳನ್ನು, ಉತ್ತಮ ಕೀರ್ತಿವಂತರನ್ನು, ಉರಿಯುತ್ತಿರುವ ಬೆಂಕಿ, ನಿರ್ಮಲವಾದ ನೀರುಳ್ಳ ಸರೋವರ, ಕೆರೆ ಇತ್ಯಾದಿ ಜಲಾಶಯವನ್ನು ನೋಡುತ್ತಾನೋ ಆತನಿಗೆ ಆಯುರಾರೋಗ್ಯ ಮತ್ತು ಧನ-ಸುಖ ಲಭಿಸುತ್ತದೆ.

**ಕನ್ಯಾಃ ಕುಮಾರಕಾನ್ ಗೌರಾನ್ ಶುಕ್ಲವಸ್ತ್ರಾನ್ ಸುತೇಜಸಃ ।**
**ನರಾಶನಂ ದೀಪ್ತತನುಂ ಸಮಂತಾಧಿಭಿರೋಕ್ಷಿತಂ ॥೩೫॥**

ಯಾವಾತನು ಕನಸಿನಲ್ಲಿ ಕನ್ಯೆಯನ್ನು, ಸಣ್ಣ ಹುಡುಗರನ್ನು, ಕಾಂತಿಯುತ ಮನುಷ್ಯರನ್ನು, ನೆತ್ತರಿನಿಂದ ಒಡಿದು ಕೊಳ್ಳುವವರನ್ನು ನೋಡುತ್ತಾನೋ ಆತನಿಗೆ ಆಯುರಾರೋಗ್ಯ ಮತ್ತು ಧನ-ಸುಖ ಲಭಿಸುತ್ತದೆ.

**ಯತ್ಪೃಶ್ಯೇಲ್ಲಭತೇ ಯೋಷೌ ಛತ್ರದರ್ಶವಿಷಾಮಿಷಮ್ ।**
**ಶುಕ್ಲಾಃ ಸುಮನಸೋ ವಸ್ತ್ರಂ ಮೇಧ್ಯಾವಾಲೇಪನಂ ತಥಾ ॥೩೬॥**

ಯಾವಾತನು ಕನಸಿನಲ್ಲಿ ಛತ್ರ, ಕನ್ನಡಿ, ವಿಷ, ಮಾಂಸ, ಬಿಳುಪಾದ ಹೂಗಳು, ಬಿಳುಪಾದ ವಸ್ತ್ರ, ಅಮೇಧ್ಯ ಇವುಗಳನ್ನು ಉಟ್ಟುಕೊಂಡವರನ್ನು ಅಥವಾ ಲೇಪಿಸಿಕೊಂಡವರನ್ನು ಮತ್ತು ಫಲಗಳನ್ನು, ಕಾಣುತ್ತಾನೋ ಆತನಿಗೆ ಆಯುರಾರೋಗ್ಯ, ಮತ್ತು ಧನ-ಸುಖ ಲಭಿಸುತ್ತದೆ.

**ಶೈಲಪ್ರಾಸಾದ ಸಫಲವೃಕ್ಷ ಸಿಂಹ ನರದ್ವಿಪಾನ್ ।**
**ಆರೋಹಂ ಗೋಶ್ವಯಾನಂಚ ತರೇನ್ನದ್ಯೋದದಿವ್ಮ್ ॥೩೭॥**

ಯಾವಾತನು ಕನಸಿನಲ್ಲಿ ಪರ್ವತ, ಉಪ್ಪರಿಗೆ, ಸಿಂಹ, ಮನುಷ್ಯ, ಆನೆ ಇವುಗಳನ್ನು ಸವಾರಿ ಮಾಡಲು ಏರುತ್ತಾನೋ, ಎತ್ತಿನ ಗಾಡಿಯಲ್ಲಿ ಸಂಚರಿಸುತ್ತಾನೋ, ಕುದುರೆ ಸವಾರಿ ಮಾಡುತ್ತಾನೋ, ಹೊಳೆ, ಸಮುದ್ರ ಇವುಗಳನ್ನು ದಾಟುತ್ತಾನೋ ಆತನಿಗೆ ಆಯುರಾರೋಗ್ಯ ಮತ್ತು ಧನ-ಸುಖ ಲಭಿಸುತ್ತದೆ.

**ಪೂರ್ವೋತ್ತರೇಣ ಗಮನಂ ಚ ಅಗಮ್ಯಾಗಮನಂ ತಥಾ ।**
**ಸಂಬಂಧಾನ್ನಿನ್ಮೃತಿದೇವೈಃ ಪಿತೃಭಿಶ್ಚಾಭಿನಂದನಮ್ ॥೩೮॥**

ಯಾವಾತನು ಕನಸಿನಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿನಲ್ಲಿ ತಿರುಗುತ್ತಾನೋ, ಹೋಗಲು ಅಸಾಧ್ಯವಾದ ಸ್ಥಳಕ್ಕೆ ಹೋಗುತ್ತಾನೋ, ತಾನು ಸತ್ತಂತೆ ಕಾಣುತ್ತಾನೋ, ಸಂಕಲೆಯಲ್ಲಿ ಸಿಕ್ಕಿದವನು ಬಿಡಲ್ಪಟ್ಟಂತೆ ಕಾಣುತ್ತಾನೋ, ದೇವರು ಮತ್ತು ಪಿತೃಗಳಿಂದ ಶುಭ ಮಾತುಗಳನ್ನು ಕೇಳುತ್ತಾನೋ ಆತನಿಗ ಆಯುರಾರೋಗ್ಯ ಮತ್ತು ಧನ-ಸುಖ ಲಭಿಸುತ್ತದೆ.

**ರೋದನಂ ಪತಿತೋತ್ಥಾನಂ ದ್ವಿಷತಾಂಚಾವಮರ್ದನಮ್ ।**
**ಯಸ್ಯಸ್ಯಾದ್ ಆಯುರಾರೋಗ್ಯಂ ವಿತ್ತಂಚ ಬಹು ಸೋಽಶ್ನುತೇ ॥**

ಯಾವಾತನು ಕನಸಿನಲ್ಲಿ ಅಳುತ್ತಾನೋ, ಬಿದ್ದವನು ಏಳುತ್ತಾನೋ ತನ್ನ ಶತ್ರುವನ್ನು ಗುದ್ದಿ ಮರ್ದಿಸುತ್ತಾನೋ ಆತನಿಗೆ ಆಯುರಾರೋಗ್ಯ ವಿಪುಲವಾದ ಧನ-ಸಂಪತ್ತು ಲಭಿಸುತ್ತದೆ ಎಂದು ಹೇಳುತ್ತಾರೆ.

**ಆನುಕ್ತ ಆದ್ಯೇ ಸ್ಮೃತ ಆಯುಷೋಂಶೇ ಶೇಷೇ ತ್ರಿಭಾಗೇ ಗತಿಜಃ ಪ್ರದಿಷ್ಟಃ । ಧಾತುಪ್ರಕೋಪಾದ್ ಗ್ರಹಪಾಕಚಿಂತಾ ದೃಷ್ಟಾಭಿ- ಚಾರೋದ್ಭವಗುಹ್ಯಕೋತ್ಥಾಃ ॥೪೦॥**

ಬ್ರಹದ್ಯಾತ್ರಾಗ್ರಂಥ ವರಾಹಮತಃ-

ರಾತ್ರೆಮಾನವನ್ನು ಮೂರು ಪಾಲುಮಾಡಿ ಒಂದನೇ ಪಾಲಿಗೆ ಅನೂಕ ವೆಂದು ಹೆಸರು. ಉಳಿದ ಎರಡು ಪಾಲುಗಳಲ್ಲಿ ಉಂಟಾಗುವ ಕನಸುಗಳಿಗೆ ಗತಿಜವೆಂದು ಹೆಸರು. ಸ್ವಪ್ನಗಳು ವಾತ-ಪಿತ್ತ-ಕಫಗಳೆಂಬ ತ್ರಿದೋಷವಿಕಾರಗಳಿಂದ, ಸೂರ್ಯಾದಿಗ್ರಹರ ಇಷ್ಟಾ-ನಿಷ್ಟ ಸ್ಥಿತಿಯಿಂದ, ಮೊದಲು ಚಿಂತಿತ

ವಿಚಾರಗಳಿಂದ, ನೋಡಿದ ದೃಶ್ಯಗಳಿಂದ, ಅಭಿಚಾರದಿಂದ, ದುಷ್ಟಗ್ರಹದ ಆವೇಶದಿಂದ ಉಂಟಾಗುತ್ತದೆ.

**ಗತ್ಯೆಷ್ಯಜಾತ್ಯಂತರಸಂಗಿಸಂಜ್ಞ: ಸ್ವಪ್ನೇಷ್ವನೂಕೇ ಗತಿಜೇ ಚ ನಿತ್ಯವಿಟ್ । ಧಾತುಪ್ರಕೋಪಾದನಿಲಾತ್ಮಕಸ್ಯ ವರ್ಷಾದಿತುಂಗಾಂ. ಬರಲಂಘನಾನಿ ॥೪೧॥**

ಅನೂಕವೆಂಬ ಕನಸಿನಲ್ಲಿ ಹಿಂದಿನ ಜನ್ಮದಲ್ಲಿ ಸಂಭವಿಸಿದ ಮತ್ತು ಮುಂದಿನ ಜನ್ಮದಲ್ಲಿ ಸಂಭವಿಸಬಹುದಾದ ವಿಷಯಗಳು ಕಂಡು ಬರುತ್ತವೆ. ಧಾತುಪ್ರಕೋಪದಿಂದ (ತ್ರಿದೋಷ ವಿಕಾರದಿಂದ), ವಾತವಿಕಾರದಿಂದ ಉಂಟಾಗುವ ಕನಸಿನಲ್ಲಿ ಎತ್ತರವಾದ ಸ್ಥಳ, ಆಕಾಶ ಇತ್ಯಾದಿ ದಾಟುವುದು ಅಥವಾ ಹಾರಾಡುವುದು ಸಂಭವಿಸುತ್ತದೆ.

**ಪಿತ್ತೇಧಿಕೇ ಕಾಂಚನರತ್ನಮಾಲಾಂ ದಿವಾಕರಾಗ್ನಿಪ್ರಭೃತೀನಿ ಪಶ್ಯನ್ । ಶ್ಲೇಷ್ಮಾಧಿಕಶ್ಚೇಂದುಭಶುಭ್ರಪುಷ್ಪಂ ಸರಿತ್ಸರೋಜಾಂ. ಬುವಿಲಂಘನಾನಿ ॥೪೨॥**

ಪಿತ್ತವಿಕಾರದಿಂದ ಉಂಟಾಗುವ ಕನಸಿನಲ್ಲಿ, ಬಂಗಾರ, ಅಥವಾ ರತ್ನ ಮಾಲೆ, ಸೂರ್ಯ, ಅಗ್ನಿ ಮೊದಲಾದವು ಕಂಡುಬರುತ್ತದೆ. ಕಫವಿಕಾರದಿಂದ ಉಂಟಾಗುವ ಕನಸಿನಲ್ಲಿ ಚಂದ್ರ, ನಕ್ಷತ್ರ, ಬಿಳಿಪುಷ್ಪ, ಹೊಳೆ, ತಾವರೆ, ನೀರು ಇವುಗಳು ಕಂಡು ಬರುತ್ತವೆ. ಅಥವಾ ನೀರಿನಲ್ಲಿ ಈಜುವುದು, ನೀರನ್ನು ದಾಟುವುದು ಇತ್ಯಾದಿ ಕಂಡು ಬರುತ್ತದೆ.

**ಜಘನ್ಯಮಧ್ಯಪ್ರಥಮೇ ನಿಶಾಂಶೇ ಪ್ರಾವೃಟ್ ಛರನ್ಮಾಧವಸಂಜ್ಞಿತೇ ಚ । ಕಾಲೇ ಮರುತ್ಪಿತ್ತಕಫಪ್ರಕೋಪಾತ್ಸಾಧಾರಣಂ ಸ್ಯಾತ್ಸ್ವಲು ಸಂನಿಪಾತೇ ॥೪೩॥**

ರಾತ್ರಿಯ ಅಂತಿಮಭಾಗ, ಮಧ್ಯಭಾಗ ಮತ್ತು ಆದಿಭಾಗವಲ್ಲಿ, ವರ್ಷಾ. ಶರುದ್ ಮತ್ತು ವಸಂತ ಋತುವಿನಲ್ಲಿ ಕ್ರಮವಾಗಿ ವಾತ, ಪಿತ್ತ ಮತ್ತು ಕಫ ವಿಕಾರದಿಂದ ಅಥವಾ ಸನ್ನಿಪಾತಜ ದೋಷದಿಂದ ಬೀಳುವ ಕನಸುಗಳು ಪ್ರಮುಖ ಆಗಿರುವುದಿಲ್ಲ.

**ದಶಾಸು ಚೋಕ್ತಂ ಗ್ರಹಪಾಕಜಾತಂ ಚಿಂತಾಸು ದೃಷ್ಟಂ ಚ ಯಥಾ ತಥೈವ । ಬಿಭತ್ಸಸತ್ತ್ವಾದಿಭವೋಽಭಿರಾಮೋ ಪಿತ್ತೋ- ದ್ಭವೋ ಗುಹ್ಯಕಜಃ ಪ್ರದಿಷ್ಟಃ ॥೪೪॥**

ಗ್ರಹಪಾಕದಿಂದ ಸಂಭವಿಸುವ ಕನಸುಗಳು ಅಂದರೆ ಗ್ರಹನು ಜಾತಕದಲ್ಲಿ ಸುಸ್ಥಿತಿಯಲ್ಲಿ ಇದ್ದರೆ ಅವನ ದಶೆ, ಅಂತರ್ದಶೆ, ವಿದಶೆ ಇತ್ಯಾದಿಗಳಲ್ಲಿ ಒಳ್ಳೇಯ ಕನಸೇ ಬೀಳುತ್ತದೆ. ದಶಾಂತರ್ದಶೆಗಳು ಅಶುಭವಾಗಿದ್ದರೆ ಕೆಟ್ಟಕನಸುಗಳು ಬೀಳುತ್ತವೆ. ದಶಾನಾಥ ಅಥವಾ ಅಂತರ್ದಶಾನಾಥನು ಗೋಚರದಲ್ಲಿಯೂ ಕೂಡಾ ಅನುಕೂಲ ಸ್ಥಾನಗಳಲ್ಲಿ ಸಂಚರಿಸುವಾಗ ವಿಶೇಷವಾಗಿ ಆಯಾಗ್ರಹರಿಗೆ ಹೇಳಿದ ಶುಭಫಲಗಳನ್ನು ನೀಡುತ್ತಾನೆ. ಈ ಕಾಲದಲ್ಲಿ ಶುಭಕನಸುಗಳು ಬೀಳುತ್ತವೆ. ದಶಾನಾಥ ಅಥವಾ ಭುಕ್ತಿನಾಥನು ಗೋಚರದಲ್ಲಿ ಪ್ರತಿಕೂಲ ಸ್ಥಾನಗಳಲ್ಲಿ ಸಂಚರಿಸುವಾಗ ಅಶುಭಫಲಗಳನ್ನು ನೀಡುತ್ತಾನೆ. ಹಾಗೆಯೇ ಆ ಕಾಲದಲ್ಲಿ ಅಶುಭಕನಸುಗಳು ಬೀಳುತ್ತವೆ. ಕನಸಿನಲ್ಲಿ ನೋಡುವ ವಸ್ತುಗಳು ಆಯಾಗ್ರಹರ ಪಂಚಭೂತಗಳ ಕಾರಕತ್ವಕ್ಕೆ ಹಾಗೂ ಗ್ರಹರ ಕಾರಕತ್ವದಲ್ಲಿರುವ ಇನ್ನಿತರ ಧಾತ್ವಾದಿ ವಸ್ತುಗಳಿಗೆ ಸಂಬಂಧಪಟ್ಟದ್ದಾಗಿ, ಮತ್ತು ಅವರು ನಿಂತ ರಾಶಿಯ ಗುಣ ಧರ್ಮಕ್ಕೆ ಅನುಗುಣವಾಗಿಯೂ ಇರುತ್ತದೆ. ಚಿಂತಿತ ವಿಚಾರವನ್ನು ಕನಸಿನಲ್ಲಿ ನೋಡಿದರೆ ಅದನ್ನು ಚಿಂತಿತ ಸ್ವಪ್ನ ಎನ್ನುತ್ತಾರೆ. ನೋಡಿದ ವಸ್ತುವನ್ನು ಕನಸಿನಲ್ಲಿ ಕಂಡರೆ ಅದನ್ನು ದೃಷ್ಟಸ್ವಪ್ನ ಎಂದು ಕರೆಯುತ್ತಾರೆ. ಶತ್ರುಕೃತ ಮಾಟ ಇತ್ಯಾದಿ ಅಭಿಚಾರದಿಂದ ಉಂಟಾದ ಕನಸುಗಳು ನೋಡಲು ಅಸಹ್ಯ ಅಥವಾ ಹೆದರಿಸುವಂಥದ್ದು ಆಗಿರುತ್ತವೆ. ಪಿತ್ತವಿಕಾರದಿಂದ ಅಥವಾ ಭೂತಾದಿ ಆವೇಶದಿಂದಲೂ ಸಂಭವಿಸುವ ಕನಸುಗಳನ್ನು ಗುಹ್ಯಕಸ್ವಪ್ನ ಎನ್ನುತ್ತಾರೆ.

**ಆಯುಷ್ಯಚಿಂತಾ ಗ್ರಹದೋಷದೃಷ್ಟಾನ್ಯಭೀಕ್ಷ್ಣಕರ್ಮಾಣಿ ಚ ನಿಷ್ಫಲಾ ನಿ । ದ್ಯುದೃಷ್ಟಪೂರ್ವಾನ್ಕಥಿತಾಂಶ್ಚ ತದ್ವದನ್ಯತ್ರ ಲೋಕೇ ಕಥಿತಾ ವಿಶೇಷಾಃ ॥೪೫॥**

ಜೀವನದಲ್ಲಿ ಚಿಂತೆಯಿಂದ, ಗ್ರಹಚಾರ ದೋಷದಿಂದ, ಭಿಭತ್ಸ್ಯ ಕರ್ಮಗಳಿಂದ ಬಿದ್ದ ಕನಸುಗಳ ಫಲವು ನಿಷ್ಫಲವಾಗುತ್ತದೆ. ಇನ್ನಿತರ ಕನಸಿನ ಫಲ ವಿಚಾರಗಳು ಇತರ ಗ್ರಂಥದಲ್ಲಿ ಹೇಳಲ್ಪಟ್ಟಿವೆ.

**ಪ್ರತ್ಯಕ್ಷವದ್ಭವತಿ ಯಃ ಸ್ಫುರತೀವ ಚಾಂತಃ ಸ್ವಪ್ನಸ್ಯ ತಸ್ಯ ನಿಯಮಾತ್ ಸದಸತ್ಫಲಾಪ್ತಿಃ । ಸ್ವಪ್ನಾಃ ಶುಭಾಶುಭಫಲಾಃ ಕಥಿತಾ ನಾರಾಣಾಮುದ್ದೇಶಮಾತ್ರಮಿಹ ತಾನಪಿ ವರ್ಣಯಾಮಿ ॥**

ಭವಿಷ್ಯದಲ್ಲಿ ಸಂಭವಿಸಬಹುದಾದ ಶುಭಾಶುಭ ಫಲಗಳನ್ನು ಶಕುನಗಳು ಸೂಚಿಸುವಂತೆ. ಸ್ವಪ್ನದಿಂದಲೂ ಭವಿಷ್ಯದಲ್ಲಿ ಸಂಭವಿಸುವ ಫಲಗಳನ್ನು ತಿಳಿಯಬಹುದು. ಕನಸಿನಲ್ಲಿ ನೋಡಿದ ಸಕಲ ದೃಶ್ಯಗಳು ಅದಕ್ಕೆ ಅನುಗುಣವಾದ ಸುಖ-ದುಃಖಯುಕ್ತ ಭಾವಿ ಘಟನೆಗಳನ್ನು ಸೂಚಿಸುತ್ತದೆ. ಇವುಗಳನ್ನೆಲ್ಲ ಈ ವರೆಗೆ ವಿವರಿಸಲಾಗಿದೆ.

**ಪ್ರತ್ಯಕ್ಷವದ್ಭವತೀತ್ಯಾದಿನಾಂ ವಕ್ತ್ರಸ್ಯ ವೀರ್ಯಲಕ್ಷಣಮ್ । ತಾ ದೃಶಸ್ಯ ಸ್ವಪ್ನಸ್ಯ ಫಲಮವಶ್ಯಂ ಭವತಿ ॥**

ಕನಸಿನಲ್ಲಿ ಕಾಣುವ ದೃಶ್ಯಗಳು ನಾವು ಪ್ರತ್ಯಕ್ಷವಾಗಿ ನೋಡುವಂತೆ ಕಾಣುತ್ತದೆ. ಕನಸಿನಲ್ಲಿ ಕಾಣುವ ಈ ದೃಶ್ಯಗಳ ಆಧಾರದಿಂದ ಸಂಭವಿಸುವ ಫಲಾಫಲ ಲಕ್ಷಣಗಳನ್ನು ಹೇಳಿರುತ್ತಾರೆ. ಇಂಥಹ ಕನಸಿನ ಫಲಗಳು ಅವಶ್ಯವಾಗಿ ಸಂಭವಿಸುತ್ತದೆ.

ಇವೆಲ್ಲ ವರಾಹಮಿಹಿರಾಚಾರ್ಯರು ತಮ್ಮ ಬೃಹದ್ಯಾತ್ರಾ ಗ್ರಂಥದಲ್ಲಿ ಹೇಳಿದ ಸ್ವಪ್ನಫಲ ವಿಚಾರ ಆಗಿರುತ್ತದೆ.

**ಆದ್ಯೇವರ್ಷಾದ್ವತ್ಸರಾರ್ಧೈಃ ದ್ವಿತೀಯೋ ಯಾಮೋ ಪಾಕೋ ಪಾಕಾತ್ತೃತೀಯೋ । ಮಾಸಾತ್ಪಾಕಾಶ್ಚರ್ವರೀ ಪಶ್ಚಿಮಾಂಶೇ ಸದ್ಯಃ ಪಾಕೋ ಗೋವಿಸರ್ಗೇಷು ದೃಷ್ಟೇ ॥೪೭॥**

ರಾತ್ರಿಯ ಮೊದಲನೇ ಯಾಮದಲ್ಲಿ ಕನಸು ಬಿದ್ದರೆ ಅದರ ಪರಿಣಾಮವು ಒಂದು ವರ್ಷದಲ್ಲಿ ಕಂಡು ಬರುತ್ತವೆ. ಎರಡನೇ ಯಾಮದಲ್ಲಿ ಬಿದ್ದ ಕನಸು ಆರು ತಿಂಗಳೊಳಗೆ ಮತ್ತು ಮೂರನೇ ಯಾಮದಲ್ಲಿ ಬಿದ್ದ ಕನಸಿನ ಫಲವು ಮೂರು ತಿಂಗಳೊಳಗೆ ಮತ್ತು ನಾಲ್ಕನೇ ಯಾಮದಲ್ಲಿ ಬಿದ್ದ ಕನಸಿನ ಫಲವು ಒಂದು ತಿಂಗಳೊಳಗೆ ಕಂಡು ಬರುತ್ತದೆ. ಬೆಳಿಗ್ಗೆ ಗೋವುಗಳನ್ನು ಬಿಡುವ ಕಾಲದಲ್ಲಿ ಕನಸು ಬಿದ್ದರೆ ಅದು ಕೂಡಲೇ ಫಲಿಸುತ್ತದೆ.

ಸ್ವಪ್ನೇ ಪಿತರಮದ್ರಾಕ್ಷಂ ಮಲಿನಂ ಮುಕ್ತಮೂರ್ಧಜಮ್ ।
ಪತಂತಮದ್ರಿಶಿಖರಾತ್ ಕಲುಷೇ ಗೋಮಯಹ್ರದೇ ॥೮॥

ಭರತನು ಕಂಡ ದುಃಸ್ವಪ್ನದ ವೃತ್ತಾಂತ

ನಾನು ಕನಸಿನಲ್ಲಿ, ನನ್ನ ತಂದೆಯು ಕೊಳಕು ಬಟ್ಟೆಯನ್ನುಟ್ಟು ತಲೆಯನ್ನು ಕೆದರಿಕೊಂಡು, ಪರ್ವತದ ತುದಿಯಿಂದ ಕಲ್ಮಷದಿಂದ ಕೂಡಿದ ಗೋಮಯದ ಹೊಂಡದಲ್ಲಿ ಬೀಳುವಂತೆ ನೋಡಿದೆನು.

ಪ್ಲವಮಾನಶ್ಚ ಮೇ ದೃಷ್ಟಃ ಸ ತಸ್ಮಿನ್ ಗೋಮಯಹ್ರದೇ ।
ಪಿಬನ್ನಂಜಲಿನಾ ತೈಲಂ ಹಸನ್ನಿವ ಮುಹುರ್ಮುಹುಃ ॥
ತತಸ್ತಿಲೌದನಂ ಭುಕ್ತ್ವಾ ಪುನಃ ಪುನರಧಶ್ಶಿರಾಃ ।
ತೈಲೇನಾಭ್ಯಕ್ತಸರ್ವಾಂಗಸ್ತೈಲಮೇವಾನ್ವಗಾಹತ ॥೯॥

ಆ ಗೋಮಯದ ಹೊಂಡದಲ್ಲಿ ನನ್ನ ತಂದೆಯು ಈಜುತ್ತ ಮತ್ತೆ ಮತ್ತೆ ನಗುತ್ತ ಬೊಗಸೆಯಿಂದ ಎಣ್ಣೆಯನ್ನು ಕುಡಿಯುವಂತೆ ನಾನು ಕನಸಿನಲ್ಲಿ ನೋಡಿದೆನು. ಅನಂತರ ನನ್ನ ತಂದೆಯು ತಲೆಯನ್ನು ತಗ್ಗಿಸಿ ಅನೇಕ ಸಲ ಎಳ್ಳನ್ನವನ್ನು ಭುಂಜಿಸಿ ತನ್ನ ಮೈಗೆಲ್ಲ ಎಣ್ಣೆಯನ್ನು ಒರಸಿಕೊಂಡು ಎಣ್ಣೆಯಲ್ಲಿ ಹಾರಿದಂತೆ ನಾನು ಕನಸಿನಲ್ಲಿ ನೋಡಿದೆನು.

ಸ್ವಪ್ನೇಽಪಿ ಸಾಗರಂ ಶುಷ್ಕಂ ಚಂದ್ರಂ ಚ ಪತಿತಂ ಭುವಿ ।
ಉಪರುದ್ಧಾಂ ಚ ಜಗತೀಂ ತಮಸೇವ ಸಮಾವೃತಾಮ್ ॥
ಔಪವಾಹಸ್ಯ ನಾಗಸ್ಯ ವಿಷಾಣಂ ಶಕಲೀಕೃತಮ್ ।
ಸಹಸಾ ಚಾಪಿ ಸಂಶಾಂತಂ ಜ್ವಲಿತಂ ಜಾತವೇದಸಮ್ ॥೧೦॥

ನಾನು ಕನಸಿನಲ್ಲಿ ಸಮುದ್ರವು ಒಣಗಿ ಹೋದಂತೆ, ಚಂದ್ರನು ಭೂಮಿಗೆ ಬಿದ್ದಂತೆ ಮತ್ತು ಲೋಕವು ಕತ್ತಲೆಯಿಂದ ಆವೃತವಾಗಿ ಕಪ್ಪಾಕ್ಕೆ ಸಿಲುಕಿದಂತೆ ನೋಡಿದೆನು. ನಮ್ಮ ಸವಾರಿಯಾನೆಯ ಆನೆಯ ದಂತವು ಪುಡಿ-ಪುಡಿ ಆದಂತೆ, ಉರಿಯುತ್ತಿರುವ ಬೆಂಕಿಯು ಆರಿಹೋದಂತೆ ನೋಡಿದೆನು.

ಅವತೀರ್ಣಾಂ ಚ ಪೃಥಿವೀಂ ಶುಷ್ಕಾಂಶ್ಚ ವಿವಿಧಾನ್ ದ್ರುಮಾನ್ ।
ಅಹಂ ಪಶ್ಯಾಮಿ ವಿಧ್ವಸ್ತಾನ್ ಸಧೂಮಾಂಶ್ಚಾಪಿ ಪರ್ವತಾನ್ ॥

**ಪೀಠೇ ಕೃಷ್ಣಾಯಸೇ ಚೈನಂ ನಿಷಣ್ಣಂ ಕೃಷ್ಣವಾಸಸಮ್।**
**ಪ್ರಹಸಂತಿ ಸ್ಮರಾಜಾನಾಂ ಪ್ರಮುದಾಃ ಕೃಷ್ಣಪಿಂಗಲಾಃ ॥೫೧॥**

ಭೂಮಿಯು ಕೆಳಗೆ ಇಳಿದುಹೋದಂತೆ, ಮರಗಳು ಒಣಗಿಹೋದಂತೆ ಮತ್ತು ಪರ್ವತಗಳು ಸುಟ್ಟು ಹೊಗೆಬಂದಂತೆ, ಕನಸಿನಲ್ಲಿ ನಾನು ನೋಡಿದೆನು. ನನ್ನ ತಂದೆಯಾದ ರಾಜನು (ದಶರಥ) ಕಪ್ಪು ಕಬ್ಬಿಣದ ಪೀಠದಲ್ಲಿ ರಕ್ತವರ್ಣದ ವಸ್ತ್ರವನ್ನು ಉಟ್ಟುಕೊಂಡು ಕೂತು ಕೊಂಡದ್ದನ್ನು ಮತ್ತು ಆತನನ್ನು ನೋಡಿ ಕಪ್ಪು ಮತ್ತು ಪಿಂಗಲವರ್ಣದ ತರುಣಿಯರು ನಗಾಡುವುದನ್ನು ನೋಡಿದೆನು.

**ತ್ವರಮಾಣಶ್ಚ ಧರ್ಮಾತ್ಮಾ ರಕ್ತಮಾಲ್ಯಾನುಲೇಪನಃ ।**
**ರಥೇನ ಖರಯುಕ್ತೇನ ಪ್ರಯಾತೋ ದಕ್ಷಿಣಾಮುಖಃ ॥೫೨॥**

ಧರ್ಮಾತ್ಮನಾದ ನಮ್ಮ ತಂದೆಯು ಕೆಂಪು ಬಣ್ಣದ ಹೂಮಾಲೆಯನ್ನು ಧರಿಸಿ ಕೆಂಪು ವರ್ಣದ ಗಂಧಾದಿಗಳನ್ನು ಧರಿಸಿಕೊಂಡು ಕತ್ತೆಗಳನ್ನು ಹೂಡಿದ ರಥವನ್ನೇರಿ ದಕ್ಷಿಣ ದಿಕ್ಕಿಗೆ ಹೋದಂತೆ, ನಾನು ಕನಸಿನಲ್ಲಿ ನೋಡಿದೆನು.

**ಪ್ರಹಸಂತೀವ ರಾಜಾನಾಂ ಪ್ರಮುದಾ ರಕ್ತವಾಸಿನೀ ।**
**ಪ್ರಕರ್ಷಂತೀ ಮಯಾ ದೃಷ್ಟಾ ರಾಕ್ಷಸೀ ವಿಕೃತಾನನಾ ॥೫೩॥**

ಕೆಂಪು ವಸ್ತ್ರವನ್ನು ಉಟ್ಟುಕೊಂಡಿರುವ ತಾರುಣ್ಯವತಿಯಾದ ಹಾಗೂ ವಿಕಾರ ಮುಖವುಳ್ಳ ರಾಕ್ಷಸಿಯು ನಗಾಡುತ್ತಾ ಅರಸನಾದ ನನ್ನ ತಂದೆಯನ್ನು ಸೆಳೆಯುತ್ತಿದ್ದಳು.

**ಶುಷ್ಯತೀವ ಚ ಮೇ ಕಂಠೋ ನ ಸ್ವಸ್ಥಮಿವ ಮೇ ಮನಃ ।**
**ಅಹಂ ರಾಮೋಽಥವಾ ರಾಜಾ ಲಕ್ಷ್ಮಣೋ ವಾ ಮರಿಷ್ಯತಿ ॥೫೪॥**

ನನ್ನ ಗಂಟಲು ಒಣಗಿದಂತೆ ಭಾಸವಾಗುತ್ತದೆ. ನನ್ನ ಮನಸ್ಸು ಸ್ವಸ್ಥವಿಲ್ಲದಂತೆ ಕಂಡು ಬರುತ್ತದೆ. ನಾನಾಗಲೀ, ರಾಮನಾಗಲೀ, ದಶರಥ ರಾಜನಾಗಲೀ ಅಥವಾ ಲಕ್ಷ್ಮಣನಾಗಲೀ ಸಾಯಬಹುದು.

**ನರೋ ಯಾನೇನ ಯಃ ಸ್ವಪ್ನೇ ಖರಯುಕ್ತೇನ ಯಾತಿ ಹಿ ।**
**ಅಚಿರಾತ್ತಸ್ಯ ಧೂಮಾಗ್ರಂ ಚಿತಾಯಾಂ ಸಂಪ್ರದೃಶ್ಯತೇ ॥**

ಕನಸಿನಲ್ಲಿ ಯಾವಾತನು ಕತ್ತೆಯಿಂದ ಎಳೆಯಲ್ಪಟ್ಟು ರಥದಲ್ಲಿ ಕುಳಿತು ಕೊಂಡು ಹೋಗುವಂತೆ ಕಾಣುತ್ತದೋ ಆತನು ಶೀಘ್ರದಲ್ಲಿಯೇ ಚಿತೆಯಲ್ಲಿ ಹಾಲಗ ಬೇಕಾಗುವುದು.

ಕಚ್ಚಿತ್ಸ ಕುಶಲೀ ರಾಜಾ ಪಿತಾ ದಶರಥೋ ಮಮ ।
ಕಚ್ಚಿಚ್ಚಾರೋಗತಾ ರಾಮೇ ಲಕ್ಷ್ಮಣೇವಾ ಮಹಾತ್ಮನಿ ॥೫೫॥
ಆರ್ಯಾ ಚ ಧರ್ಮನಿರತಾ ಧರ್ಮಜ್ಞಾ ಧರ್ಮದರ್ಶಿನೀ ।
ಅರೋಗಾ ಚಾಪಿ ಕೌಸಲ್ಯಾ ಮಾತಾ ರಾಮಸ್ಯ ಧೀಮತಃ ॥೫೬॥

ನನ್ನ ತಂದೆಯಾದ ದಶರಥ ರಾಜನು ಕ್ಷೇಮದಿಂದ ಇದ್ದಾನೋ, ಮಹಾತ್ಮ ರಾದ ರಾಮ-ಲಕ್ಷ್ಮಣರು ಆರೋಗ್ಯವಂತರಾಗಿರುವರೋ, ಪೂಜ್ಯಳೂ, ಸಾಧ್ವಿಯೂ, ಬುದ್ಧಿವಂತಳೂ, ಧರ್ಮಜ್ಞಳೂ, ಗುಣವಂತಳೂ ಆದ ಶ್ರೀರಾಮ ಚಂದ್ರನ ತಾಯಿಯು ಆರೋಗ್ಯವಾಗಿರುವಳೋ ?

ಕಚ್ಚಿತ್ ಸುಮಿತ್ರಾ ಧರ್ಮಜ್ಞಾ ಜನನೀ ಲಕ್ಷ್ಮಣಸ್ಯ ಯಾ ।
ಶತ್ರುಘ್ನಸ್ಯ ಚ ವೀರಸ್ಯ ಸಾರೋಗಾ ಚಾಪಿ ಮಧ್ಯಮಾ ॥೫೭॥
ಆತ್ಮಕಾಮಾ ಸದಾ ಚಂಡೀ ಕ್ರೋಧನಾ ಪ್ರಾಜ್ಞಮಾನಿನೀ ।
ಅರೋಗಾ ಚಾಪಿ ಮೇ ಮಾತಾ ಕೈಕೇಯೀ ಕಿಮುವಾಚ ಹ ॥

ಧರ್ಮಜ್ಞಳಾದ ಹಾಗೂ ವೀರರಾದ ಲಕ್ಷ್ಮಣ ಮತ್ತು ಶತ್ರುಘ್ನರಿಗೆ ತಾಯಿಯಾದ ಸುಮಿತ್ರಾದೇವಿಯು ಕೂಡಾ ಸುಖವಾಗಿರುವಳೋ ? ನನ್ನ ತಾಯಿ ಕೈಕೆಯಿಯು ಕುಶಲಳಾಗಿ ಇದ್ದಾಳೋ ? ಯಾವಾಗಲೂ ಸ್ವಾರ್ಥಸಾಧ ಕಳೂ, ಹಠಮಾರಿಯೂ, ಕೋಪಿಷ್ಠಳೂ, ತಾನೇ ಬುದ್ಧಿವಂತಳೆಂದು ಭಾವಿಸುವ ಅವಳು ಏನು ಹೇಳಿರುತ್ತಾಳೆ ?

ದೃಷ್ಟ್ವಾ ಭರತೇನೈತೇ ಸ್ವಪ್ನಾಸ್ಸರ್ವೇ ಚ ದೋಷದಾಃ ।
ನೂನಮೇತ್ಯೈರ್ಯದಮುಷ್ಯಾಭೂತ್ತಾ ತಾದೀನಾಂ ವಿಪಚ್ಛಜ್ಞಾ ॥

ಭರತನಿಂದ ನೋಡಲ್ಪಟ್ಟ, ರಾಮಾಯಣದಲ್ಲಿ ವಿವರಿಸಿದ ಈ ಕನಸುಗಳೆಲ್ಲ ದೋಷಗಳನ್ನು ಸೂಚಿಸುವಂಥವುಗಳಾಗಿರುತ್ತವೆ. ಈ ತರದ ಕನಸುಗಳು ದಶರಥ ಮೊದಲಾದವರಿಗೆ ಸಂಭವಿಸುವ ಅಶುಭಫಲ ಪೂರ್ವ ಸೂಚನೆ ಭರತನಿಗೆ ನೀಡಿ ರುತ್ತದೆ.

ಸ್ವಪ್ನೇ ರುಧಿರಂ ಮಧ್ಯಂ ಪಿಬತಿ ಯದಿ ಬ್ರಾಹ್ಮಣಸ್ಯ ವಿದ್ಯಾಽಽಪ್ತಿಃ।
ಧನಲಾಭಸ್ತ್ವಿತರೇಷಾಂ ಯೋಽಥ ಪುನಃ ಪಶ್ಯತಿ ಸ್ವಪ್ನೇ ॥೬೦॥
ನೃಪಗಜಹಯ ಕನಕವೃಷಾನ್ ಗಾಮಥವಾ ರೋಗಿಣಂ ಪುರು-
ಷರ್ವ್ । ಸ ಲಭತೇಪ್ಸಿತ ಮಖಿಲಂ ರಾಜ್ಞಶ್ಚೇದ್ರಾಜ್ಯಲಬ್ಧಿ-
ರಚಿರೇಣ ॥೬೧॥

ಬ್ರಾಹ್ಮಣನು ಕನಸಿನಲ್ಲಿ ರಕ್ತ ಅಥವಾ ಹೆಂಡವನ್ನು ಕುಡಿದರೆ ಆತನಿಗೆ ವಿದ್ಯಾಪ್ರಾಪ್ತಿ ಆಗುತ್ತದೆ. ಉಳಿದ ವರ್ಣದವರು ರಕ್ತ ಅಥವಾ ಹೆಂಡವನ್ನು ಕುಡಿದರೆ ಅವರಿಗೆ ಧನಲಾಭ ಆಗುತ್ತದೆ.

ಯಾವಾತನು ಕನಸಿನಲ್ಲಿ ಅರಸ, ಆನೆ, ಕುದುರೆ, ಬಂಗಾರ, ಹೋರಿ, ಗೋವು ಅಥವಾ ರೋಗವಿಲ್ಲದ ಗಂಡಸನ್ನು ನೋಡಿದರೆ ಆತನು ಶೀಘ್ರದಲ್ಲಿಯೇ ತನ್ನ ಮನಸ್ಸಿನಲ್ಲಿರುವ ಸಕಲ ವಸ್ತುಗಳನ್ನು ಪಡೆಯುತ್ತಾನೆ. ರಾಜನು ಕನಸಿನಲ್ಲಿ ಇವುಗಳನ್ನು ಕಂಡರೆ ಆತನಿಗೆ ಶೀಘ್ರದಲ್ಲಿಯೇ ರಾಜ್ಯಪ್ರಾಪ್ತಿ ಆಗುತ್ತದೆ.

ಚಾಮರ ಚಂದನ ಶಂಖಾನ್ ಮೌಕ್ತಿಕತಾಂಬೂಲಜಾತಿಕುಸು-
ಮಾನಿ ಧನಮುತ್ಪಲಮಿತ್ಯೇಷಾಂ ಲಾಭಸ್ಸ್ವಪ್ನೇ ಜಲೂಕಾಯಾಃ ।
ದಂಶಸ್ಯ ಮಕ್ಷಿಕಾಯಾ ಯಸ್ಯಸ್ಯಾತ್ ತಸ್ಯ ತನಯಾಧನಲಬ್ಧಿಃ
ಪ್ರಾಸಾದ ದಾರಾರೋಹೋ ರಾಜ್ಞಕೃದಪಿ ನಿಕೃಷ್ಟ ಕುಲಜಾತಸ್ಯ ॥

ಯಾವಾತನು ಕನಸಿನಲ್ಲಿ ಚಾಮರ, ಚಂದನ, ಶಂಖ, ವೀಳ್ಯದೆಲೆ, ಜಾಜಿ ಹೂ ಇವುಗಳನ್ನು ಕಾಣುತ್ತಾನೋ ಆತನಿಗೆ ಧನಲಾಭ ಆಗುತ್ತದೆ ಎಂದು ತಿಳಿಯಬೇಕು. ಯಾವಾತನು ಕನಸಿನಲ್ಲಿ ಕಂಬಳಿ ಹುಳ, ಜೇನುನೊಣ ಅಥವಾ ಇತರ ಕೀಟಗಳಿಂದ ಕಚ್ಚಲ್ಪಟ್ಟರೆ ಆತನಿಗೆ ಶೀಘ್ರದಲ್ಲಿಯೇ ಧನ ಮತ್ತು ಸಂತಾನಲಾಭ ಆಗುತ್ತದೆ.

ಯಾವಾತನು ಕನಸಿನಲ್ಲಿ ಉಪ್ಪರಿಗೆ ಹತ್ತುವುದು ಅಥವಾ ಕೆಳಗಿನಿಂದ ಎತ್ತರವಾದ ಭೂಮಿ ಮೇಲೆ ಏರುವುದು ಕಂಡು ಬಂದರೆ ಆತನು ನಿಕೃಷ್ಟ ಜಾತಿ ಯವನಾದರೂ ಆತನಿಗೆ ರಾಜ್ಯಲಾಭ ಆಗುತ್ತದೆ ಎಂದು ತಿಳಿಯಬೇಕು.

ಮಲಿನೇ ಪಂಕಜಪತ್ರೇ ಮಧ್ಯೇ ಘೃತ ಪಾಯಸಂ । ತಟಾಕಸ್ಯ
ಮನುಜೋ ಯೋಽಶ್ನಾತಿ ಸ ಲಭತೇ ಮಹತೀಂ ವಿದ್ಯಾಂ
ಮಹಾಜನೈರ್ಮಾನ್ಯಾಮ್ ॥೬೩॥

ಯಾವಾತನು ಕನಸಿನಲ್ಲಿ ಕೆಸರಿನಿಂದ ಕೂಡಿದ ತಾವರೆ ಎಲೆಯಲ್ಲಿ, ಕೆರೆಯ ದಡದಲ್ಲಿ, ತುಪ್ಪವನ್ನು, ಪಾಯಸವನ್ನು ತಿನ್ನುತ್ತಾನೋ ಆತನು ಲೋಕ ಮಾನ್ಯವಾಗಿರುವ ಮಹಾನ್ ವಿದ್ಯೆಯನ್ನು ಪಡೆಯುತ್ತಾನೆ.

**ಬದ್ಧೋಯೋ ನಿಗಳೇನ ಸ್ವಪ್ನೇನೈವಾಥ ಪಾಶಾದ್ಯೈಃ । ಸಲಭೇ-**
**ತಾತ್ಮಜಮಚಿರಾತ್ ಸ್ಥಿತಿಮಥವಾ ಸುಸ್ಥಿರಾಂ ಸುಸುಖಾಮ್ ॥**

ಯಾವಾತನು ಕನಸಿನಲ್ಲಿ ಸಂಕೋಲೆ ಅಥವಾ ಹಗ್ಗದಿಂದ ಕಟ್ಟಲ್ಪಡುತ್ತಾನೋ ಆತನಿಗೆ ಶೀಘ್ರವೇ ಗಂಡು ಮಗು ಜನಿಸುತ್ತದೆ. ಅಲ್ಲದೇ ಸ್ಥಾನ ಪ್ರಾಪ್ತಿ ಅಥವಾ ಸುಖ ಲಭಿಸುತ್ತದೆ.

**ಆಸನಶಯನ ಗೃಹೇಷು ಜಲ್ಪಿತೇಷು ಕಳೇವರೇ । ನಿಜೇಯಾನೀ**
**ಅಪಿಯಃಖಲು ಬಾದ್ಧ್ಯೇತ ಸ್ವಧನಮಚಿರೇಣಾಪ್ನುಯಾನ್**
**ಮನುಜಃ ॥೬೫॥**

ಯಾವಾತನು ಕನಸಿನಲ್ಲಿ ತನ್ನ ಆಸನ, ಮಂಚ, ಅಥವಾ ಮನೆಯು ಸುಟ್ಟು ಹೋದಂತೆ ಕಾಣುತ್ತಾನೋ ಅಥವಾ ತನ್ನ ಶರೀರವೇ ಸುಟ್ಟುಹೋದಂತೆ ಕಂಡು ಬಂದರೆ, ತನ್ನ ವಾಹನಕ್ಕೆ ಬೆಂಕಿ ಹಿಡಿದಂತೆ ಕಂಡು ಬಂದರೆ ಆತನಿಗೆ ಶೀಘ್ರವೇ ಧನಲಾಭ ಆಗುತ್ತದೆ.

**ಸ್ವಪ್ನೇ ಕ್ರೌಂಚೀ ಲಬ್ಧ್ವಾಯೋ ಮನುಜಃ ಕುಕ್ಕುಟಾಂ ।**
**ಬಿಲಾಕಾಂ ವಾ ಬದ್ಧ್ಯೇತ ಲಭೇತಾಯಂ ಪ್ರಿಯಗಿರಮಂಗನಾಂಚ**
**ಕನ್ಯಾಂ ವಾ ॥೬೬॥**

ಯಾವಾತನು ಕನಸಿನಲ್ಲಿ ಕೊಕ್ಕರೆ, ಕೋಳಿ ಅಥವಾ ನೀರುಕಾಗೆಯನ್ನು ಕಂಡು ಎಚ್ಚರಗೊಳ್ಳುತ್ತಾನೋ ಆತನು ಪ್ರಿಯವಾಗಿ ಮಾತಾಡುವ ತರುಣಿಯನ್ನು ಹೊಂದುತ್ತಾನೆ. ಅಥವಾ ಆತನಿಗೆ ಹೆಣ್ಣುಮಗು ಜನಿಸುತ್ತದೆ.

**ರವಿಶಶಿಮಂಡಲವೀಕ್ಷ್ಯ ರೋಗ್ಯಾರೋಗ್ಯಕೃದರೋಗಧನಲಬ್ಧೈ।**
**ಉಡುಪರಿವೃತಮುಡುಪಮಿನಂಭಾಪೂರ್ಣಂ ಪಾವಕಂ ಹವಿರ್ದೀ-**
**ಪ್ತಮ್ । ೬೭॥**

ಕನಸಿನಲ್ಲಿ ಸೂರ್ಯ ಮಂಡಲ ಅಥವಾ ಚಂದ್ರ ಮಂಡಲವನ್ನು ರೋಗಿಯು ನೋಡಿದರೆ ಆತನು ರೋಗಮುಕ್ತನು ಆಗುತ್ತಾನೆ. ಸ್ವಸ್ಥನಾಗಿರುವವನಾದರೆ ಆತನಿಗೆ ಧನಲಾಭ ಆಗುತ್ತದೆ. ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನನ್ನು, ಮೋಡಗಳಿಂದ ಆವರಿಸಲ್ಪಡದಿರುವ ಸೂರ್ಯನನ್ನು, ಹವಿಸ್ಸನ್ನು ತಿನ್ನುತ್ತಾ ಜ್ವಲಿಸುತ್ತಿರುವ ಅಗ್ನಿಯನ್ನು ಕನಸಿನಲ್ಲಿ ನೋಡಿದರೆ ಆತನಿಗೆ ಧನಲಾಭ ಆಗುತ್ತದೆ.

**ಸ್ವಪ್ನೇ ಪಶ್ಯತಿಯೋಯಹ: ಫಲಕುಸುಮಂ ಮುಕುರ ರತ್ನದಧಿ ಕಲಶಾನ್ । ತಂಡುಲ ದುಗ್ಧಾದೀನ್ಯಾಪಿ ಲಭತೇ ಸಾಮುಪೈತಿ ಮಹಾಲಕ್ಷ್ಮೀ ॥೬೮॥**

ಯಾವಾತನು ಕನಸಿನಲ್ಲಿ ಹಣ್ಣು, ಹೂ, ಕನ್ನಡಿ, ರತ್ನ, ಮೊಸರು, ಕಲಶ, ಅಕ್ಕಿ, ಹಾಲು ಇವುಗಳನ್ನು ಕಾಣುತ್ತಾನೋ ಆತನಿಗೆ ಹೇರಳ ಧನ, ಸಂಪತ್ತು ಲಭಿಸುತ್ತದೆ.

**ವತ್ಸತತೋಽಷ್ಟಗತೋ ವಾ ಮಾಸತ್ರಿತಯೇನ ನಾಸರ್ಕೈರ್ದಶಭಿ: ।
ರಾತ್ರೇರ್ಯಾಮಕ್ರಮತೋ ಜ್ಞೇಯಸ್ಸ್ವಪ್ನಸ್ಯ ಫಲಪಾಕ: ॥೬೯॥**

ರಾತ್ರಿಯ ಮೊದಲನೇ ಯಾಮದಲ್ಲಿ ಕಂಡ ಕನಸಿನ ಫಲವು ಮೂರು ತಿಂಗಳೊಳಗೆ ಮತ್ತು ನಾಲ್ಕನೇ ಯಾಮದಲ್ಲಿ ಕಂಡ ಕನಸಿನ ಫಲವು ಹತ್ತು ದಿನಗಳೊಳಗೆ ಸಂಭವಿಸುತ್ತದೆ. ಈ ರೀತಿಯಾಗಿ ಯಾಮ ಕ್ರಮದಿಂದ ಕನಸಿನ ಫಲ ಪಾಕ ಕಾಲವನ್ನು ನಿರ್ಣಯಿಸಬೇಕು.

ಇಲ್ಲಿಗೆ ಪ್ರಶ್ನಮಾರ್ಗ ಗ್ರಂಥದ ಸ್ವಪ್ನಫಲ ಎಂಬ ಮೂವತ್ತೊಂದನೇ ಅಧ್ಯಾಯ ಮುಗಿಯಿತು.

  

 

ಸ್ನೇಹಾಭಕ್ತಶರೀರಸ್ತು ಕರಭವ್ಯಾಲಗರ್ದಭೈಃ । ವರಾಹೈ-
ರ್ಮಹಿಷೈರ್ವಾಪಿ ಯೋ ಯಾಯಾದ್ದಕ್ಷಿಣಾಮುಖಃ ॥೧॥

ಎಣ್ಣೆಯನ್ನು ಮೈಗೆಹಚ್ಚಿ ಒಂಟೆ, ಹಾವು, ಸಿಂಹಾದಿ ಕ್ರೂರಮೃಗಗಳಿಂದ, ಕತ್ತೆ, ಹಂದಿ, ಎಮ್ಮೆ ಇವುಗಳೊಂದಿಗೆ ಅಥವಾ ಇವುಗಳ ಮೇಲೆ ಸವಾರಿ ಮಾಡುತ್ತಾ ದಕ್ಷಿಣದಿಕ್ಕಿಗೆ ಹೋದಂತೆ ಯಾವಾತನು ಕನಸಿನಲ್ಲಿ ಕಾಣುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ಆತನು ರೋಗಿಯಾದರೆ ಮರಣ ಹೊಂದುತ್ತಾನೆ.

ರಕ್ತಾಂಬರಧರಾ ಕೃಷ್ಣಾ ಹಸನ್ತಿ ಮುಕ್ತಮೂರ್ಧಜಾ ।
ಯಂ ವಾಕರ್ಷತಿ ಬದ್ಧ್ವಾ ಸ್ತ್ರೀ ನೃತ್ಯನ್ತೀ ದಕ್ಷಿಣಾಮುಖಮ್ ॥

ಕೆಂಪು ಬಟ್ಟೆಯನ್ನು ಧರಿಸಿದ ಕಪ್ಪು ವರ್ಣದ ಹೆಂಗಸು ತಲೆ ಕೆದರಿಕೊಂಡು ನಗಾಡುತ್ತಾ ಯಾವ ಪುರುಷನನ್ನು ಅಪ್ಪಿಕೊಂಡು ನಗೆಯುತ್ತಾ, ಕುಣಿಯುತ್ತಾ ದಕ್ಷಿಣದಿಕ್ಕಿಗೆ ಎಳೆದುಕೊಂಡು ಹೋದಂತೆ ಯಾವಾತನು ಕನಸಿನಲ್ಲಿ ಕಾಣುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ಆತನು ರೋಗಿಯಾದರೆ ಮರಣ ಹೊಂದುತ್ತಾನೆ.

ಅನ್ತ್ಯಾವಸಾಯಿಭಿರ್ಯೋವಾಕೃಷ್ಯತೇ ದಕ್ಷಿಣಾಮುಖಃ ।
ಪರಿಷ್ವಜೇರನ್ ಯಂ ವಾಪಿ ಪ್ರೇತಾಃ ಪ್ರವ್ರಜಿತಾಸ್ತಥಾ ॥೩॥

ಕನಸಿನಲ್ಲಿ ಯಾವಾತನು ಅನ್ಯಜಾತಿಯವರಿಂದ (ನೀಚಜಾತಿಯ ಜನರಿಂದ) ದಕ್ಷಿಣ ದಿಕ್ಕಿಗೆ ಎಳೆಯಲ್ಪಡುತ್ತಾನೋ, ಪ್ರೇತಗಳಿಂದ ಅಥವಾ ಸನ್ಯಾಸಿಗಳಿಂದ ತಬ್ಬಿಕೊಳ್ಳಲ್ಪಡುತ್ತಾನೋ ಆತನಿಗೆ ರೋಗ ಉಂಟಾಗುತ್ತದೆ. ಆತನು ರೋಗಿಯಾದರೆ ಮರಣ ಹೊಂದುತ್ತಾನೆ.

ಮೂರ್ಧನ್ಯಾಘ್ರಾಯತೇ ಯಸ್ತು ಶ್ವಾಪದೈರ್ವಿಕೃತಾನನೈಃ ।
ಪಿಬೇನ್ಮಧು ಚ ತೈಲಂ ಚ ಯೋ ವಾ ಪಂಕೇಽವಸೀದತಿ ॥೪॥

ಕನಸಿನಲ್ಲಿ ಯಾವಾತನು ವಿಕೃತ ಮುಖವುಳ್ಳ ಪ್ರಾಣಿಗಳಿಂದ ನೆಕ್ಕಲ್ಪಡುತ್ತಾನೋ ಯಾವಾತನು ಮದ್ಯವನ್ನು ಅಥವಾ ಎಣ್ಣೆಯನ್ನು ಕುಡಿಯುತ್ತಾನೋ, ಕೆಸರಿನಲ್ಲಿ ಮುಳುಗುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

ಪಂಕಪ್ರದಿಗ್ಧಗಾತ್ರೋ ವಾ ಪ್ರನೃತ್ಯೇತ್ ಪ್ರಹಸೇತ್ತಥಾ ।
ನಿರಮ್ಬರಶ್ಚ ಯೋ ರಕ್ತಾಂ ಧಾರಯೇಚ್ಛಿರಸಿ ಸ್ರಜಮ್ ॥೬॥

ಕನಸಿನಲ್ಲಿ ಯಾವಾತನು ಕೆಸರನ್ನು ಮೈಗೆಹಚ್ಚಿಕೊಂಡು ಕುಣಿಯುತ್ತಾನೋ ಅಥವಾ ನಗುತ್ತಾ ಇರುತ್ತಾನೋ, ನಗ್ನನಾಗಿ ತಲೆಯಲ್ಲಿ ಕೆಂಪು ಹೂಗಳನ್ನು ಧರಿಸಿರುತ್ತಾನೋ ಅತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

ಯಸ್ಯ ವಂಶೋ ನಲೋ ವಾಪಿ ತಾಲೋ ವೋರಸಿ ಜಾಯತೇ ।
ಯಂ ವಾ ಮತ್ಸ್ಯೋಗ್ರಸೇದ್ಯೋ ವಾ ಜನನೀಂ ಪ್ರವಿಶೇನ್ನರಃ ॥

ಕನಸಿನಲ್ಲಿ ಯಾವಾತನ ಎದೆಯಲ್ಲಿ ಬಿದಿರು, ನಳಕ ಅಥವಾ ತಾಳೆಮರ ಹುಟ್ಟುತ್ತದೋ, ಯಾವಾತನನ್ನು ಮೀನು ನುಂಗುತ್ತದೋ ಅಥವಾ ತಾಯಿಯ ಉದರ ಪ್ರವೇಶಿಸುತ್ತಾನೋ ಅತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

ಪರ್ವತಾಗ್ರಾತ್ಪತೇದ್ಯೋ ವಾ ಶ್ವಭ್ರೇ ವಾ ತಮಸಾವೃತೇ ।
ಹ್ರಿಯತೇ ಸ್ರೋತಸಾ ಯೋ ವಾ ಮೌಣ್ಢ್ಯಮವಾಪ್ನುಯಾತ್ ॥

ಕನಸಿನಲ್ಲಿ ಯಾವಾತನು ಪರ್ವತದ ತುದಿಯಿಂದ ಬೀಳುತ್ತಾನೋ, ಕತ್ತಲೆಯಿಂದ ಆವೃತ ಹಳ್ಳಕ್ಕೆ ಬೀಳುತ್ತಾನೋ, ಪ್ರವಾಹದ ಸೆಳೆತಕ್ಕೆ ಕೊಚ್ಚಿಕೊಂಡು ಹೋಗುತ್ತಾನೋ, ತಲೆಯನ್ನು ಬೋಳಿಸಿಕೊಳ್ಳುತ್ತಾನೋ ಆತನು ರೋಗದಿಂದ ಪೀಡಿಸಲ್ಪಡುತ್ತಾನೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

ಪರಾಜೀಯೇತ ಬಧ್ಯೇತ ಕಾಕಾದ್ಯೈರಭಿಭೂಯತೇ ।
ಪತನಂ ತಾರಕಾದೀನಾಂ ಪ್ರಣಾಶಂ ದೀಪಚಕ್ಷುಷೋಃ ॥೮॥

ಕನಸಿನಲ್ಲಿ ಯಾವಾತನು ಸೋತವನಾಗಿ ಬಂಧಿಸಲ್ಪಡುತ್ತಾನೋ, ಕಾಗೆ ಮೊದಲಾದ ಪಕ್ಷಿಗಳಿಂದ ಅಟ್ಟಿಸಿಕೊಂಡವನಾಗಿ ಓಡಿಹೋಗುತ್ತಾನೋ, ಆಕಾಶದಲ್ಲಿರುವ ನಕ್ಷತ್ರ ಮೊದಲಾದವು ಕೆಳಕ್ಕೆ ಬಿದ್ದಂತೆ ಕಾಣುತ್ತಾನೋ, ದೀಪವು ನಂದಿ ಹೋದಂತೆ, ಕಣ್ಣುಗಳು ನಾಶವಾದಂತೆ ಕಾಣುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

**ಯಃ ಪಶ್ಯೇದ್ದೇವತಾನಾಂ ಚ ಪ್ರಕಂಪಮವನೇಸ್ತಥಾ ।**
**ಯಸ್ಯ ಛರ್ದಿರ್ವಿರೇಕೋ ವಾ ದಶನಾಃ ಪ್ರಪತಂತಿ ವಾ ॥೯॥**

ಯಾವಾತನು ಕನಸಿನಲ್ಲಿ ದೇವರ ಪ್ರತಿಮೆ ವಾಯವಾಗಿ ಹೋದಂತೆಯೂ ಭೂಮಿಯು ಅದುರಿದಂತೆಯೂ, ಅಂದರೆ ಭೂಕಂಪ ಆದಂತೆ ಕಾಣುತ್ತಾನೋ, ತಾನು ವಾಂತಿ ಅಥವಾ ವಿರೇಚನ ಮಾಡಿದಂತೆ ಅಥವಾ ಹಲ್ಲುಗಳು ಉದುರಿ ಬಿದ್ದಂತೆ ಕಾಣುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಸಂಭವಿಸುತ್ತದೆ.

**ಶಾಲ್ಮಲೀಂ ಕಿಂಶುಕಂ ಯೂಪಂ ವಲ್ಮೀಕಂ ಪಾರಿಭದ್ರಕಮ್ ।**
**ಪುಷ್ಪಾಢ್ಯಂ ಕೋವಿದಾರಂ ವಾ ಚಿತಾಂ ವಾ ಯೋಽಧಿ ರೋಹತಿ ॥೧೦॥**

ಯಾವಾತನು ಕನಸಿನಲ್ಲಿ ಬೂರಗ, ಮುತ್ತಗ, ಯಜ್ಞಸ್ತಂಭ, ಹುತ್ತ, ಬೇವಿನ ಮರ ಪುಷ್ಪಭರಿತವಾದ ಕಂಚುವಾಳದ ಗಿಡ ಹತ್ತುತ್ತಾನೋ ಅಥವಾ ಚಿತೆಯನ್ನು ಏರಿದಂತೆ ಕಾಣುತ್ತಾನೋ ಆತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣ ಹೊಂದುತ್ತಾನೆ.

**ಕಾರ್ಪಾಸತೈಲ ಪಿಣ್ಯಾಕ ಲೋಹಾನಿ ಲವಣಂ ತಿಲಾನ್ ।**
**ಲಭೇತಾಶ್ನೀತ ವಾ ಪಕ್ವಮನ್ನಂ ಯಶ್ಚ ಪಿಬೇತ್ ಸುರಾಮ್ ॥೧೧॥**

ಯಾವಾತನು ಕನಸಿನಲ್ಲಿ ಹತ್ತಿ, ಎಣ್ಣೆ, ಹಿಂಡಿ, ಲೋಹ, ಉಪ್ಪು, ಎಳ್ಳು ಇವು ಲಭಿಸಿದಂತೆ ಕಾಣುತ್ತಾನೋ, ಪಕ್ವಾನ್ನ ಭೋಜನ ಮಾಡಿದಂತೆ, ಸುರಪಾನ ಮಾಡಿದಂತೆ ಕಾಣುತ್ತಾನೋ, ಆತನಿಗೆ ರೋಗ ಸಂಭವಿಸುತ್ತದೆ. ರೋಗಿಯಾದರೆ ಮರಣಹೊಂದುತ್ತಾನೆ.

**ಸ್ವಪ್ನೇಷು ನಗ್ನಾನ್ ಮುಂಡಾಂಶ್ಚ ರಕ್ತಕೃಷ್ಣಾಂಬರಾವೃತಾನ್ ।**
**ವ್ಯಙ್ಗಾಶ್ಚ ವಿಕೃತಾನ್ ಕೃಷ್ಣಾನ್ ಸಪಾಶಾನ್ ಸಾಯುಧಾನಪಿ ।**
**ಭಧ್ನತೋ ನಿಘ್ನತಶ್ಚಾಪಿ ದಕ್ಷಿಣಾಂ ದಿಶಿಮಾಶ್ರಿತಾನ್ ।**
**ಮಹಿಷೋಷ್ಟ್ರಖರಾರೂಢಾನ್ ಸ್ತ್ರೀಪುಂಸೋಯಸ್ತು ಪಶ್ಯತಿ ।**
**ಸಃ ಸ್ವಸ್ಥೋ ಲಭತೇ ವ್ಯಾಧೀಂ ರೋಗೀಯಾಂತ್ಯೇವ ಪಂಚ ತಾಮ್ ॥೧೨॥**

ಯಾವಾತನು ಕನಸಿನಲ್ಲಿ ನಗ್ನನನ್ನು, ತಲೆಬೋಳಿಸಿದವನನ್ನು, ರಕ್ತದಂತೆ ಕೆಂಪು ಬಣ್ಣ ಅಥವಾ ಕಪ್ಪು ಬಣ್ಣದ ವಸ್ತ್ರವನ್ನು ಉಟ್ಟವನನ್ನು, ಅಂಗವೈಕಲ್ಯ ಉಳ್ಳವನನ್ನು, ವಿಕೃತರೂಪ ಉಳ್ಳ ಕಪ್ಪು ವರ್ಣದವನನ್ನು, ಕೈಯಲ್ಲಿ ಪಗ್ಗವನ್ನು ಹಿಡಿದವನನ್ನು, ಆಯುಧ ಧರಿಸಿದವನನ್ನು, ಬಂಧಿಸಲ್ಪಟ್ಟವನನ್ನು, ಪಟ್ಟಾದವ ಅಥವಾ ಘಾಯಗೊಂಡವನನ್ನು, ದಕ್ಷಿಣದಿಕ್ಕಿಗೆ ಹೋಗುವವನನ್ನು, ಕೋಣ, ಒಂಟೆ, ಕತ್ತೆ ಇವುಗಳ ಸವಾರಿ ಮಾಡುವವನನ್ನು, ಈ ರೀತಿಯ ಸ್ತ್ರೀ ಅಥವಾ ಪುರುಷನನ್ನು ಆರೋಗ್ಯವಂತನು ನೋಡಿದರೆ ಆತನು ರೋಗ ಪೀಡಿತನು ಆಗುತ್ತಾನೆ. ರೋಗ ಉಳ್ಳವನು ಇವುಗಳನ್ನು ಕನಸಿನಲ್ಲಿ ನೋಡಿದರೆ ಆತನಿಗೆ ಮರಣ ಸೂಚಿಸುತ್ತದೆ.

**ಅಧೋಯೋ ನಿಪತೇ ದುಚ್ಚಾಜ್ಜಲೇಗ್ನೌವಾ ವಿಲೀಯತೇ ।**
**ಶ್ವಾಹೆದ್ಯೈರ್ಹನ್ಯತೇ ಯೋಪಿ ಮತ್ಸ್ಯಾದ್ಯೈಃರ್ಗಿಳಿತೋ ಭವೇತ್ ॥**

ಯಾವಾತನು ಕನಸಿನಲ್ಲಿ ತಾನು ಎತ್ತರದಿಂದ ಕೆಳಗೆ ಬಿದ್ದಂತೆ ಕಾಣುತ್ತಾನೋ, ನೀರಿನಲ್ಲಿ ಅಥವಾ ಬೆಂಕಿಯಲ್ಲಿ ಬೀಳುವುದು, ನಾಯಿಯಿಂದ ಕಚ್ಚಲ್ಪಡುವುದು, ಮತ್ಸ್ಯಾದಿ ಜಲಜೀವಿಗಳಿಂದ ನುಂಗಲ್ಪಟ್ಟಂತೆ ಕಂಡುಬರುವುದು ಆತನಿಗೆ ಅಶುಭಫಲ ಸೂಚಕ ಆಗಿರುತ್ತದೆ.

**ಯಸ್ಯ ನೇತ್ರೇ ವಿಲೀಯೇತೇ ದೀಪೋ ನಿರ್ವಾಣತಾಂ ವ್ರಜೇತ್ ।**
**ತೈಲಂ ಸುರಾಂ ಪಿಬೇದ್ವಾಪಿ ಲೋಹಂ ವಾ ಲಭತೇ ತಿಲಾನ್ ॥೧೪॥**

ಯಾವಾತನು ಕನಸಿನಲ್ಲಿ ತನ್ನ ಕಣ್ಣುಗಳು ಒಡೆದು ಹೋದುದನ್ನು ನೋಡುತ್ತಾನೋ, ಉರಿಯುತ್ತಿರುವ ದೀಪ ನಂದಿ ಹೋಗುವುದು, ಎಣ್ಣೆ ಅಥವಾ ಮದ್ಯ ಕುಡಿಯುವುದು, ಕಬ್ಬಿಣ ಅಥವಾ ಎಳ್ಳು ಸಿಕ್ಕುವುದು ಕಂಡು ಬಂದರೆ ಆತನಿಗೆ ಅಶುಭಫಲ ಸಂಭವಿಸುತ್ತದೆ.

**ಪಕ್ವಾನ್ನಂ ಲಭತೇಶ್ನಾತಿ ವಿಶೇತ್ ಕೂಪ ರಸಾತಲಂ ।**
**ಸಸ್ವಸ್ಥೋ ಲಭತೇ ರೋಗಂ ರೋಗಿಯಾತ್ಯೇವ ಪಂಚತಾಂ ॥೧೫॥**

ಯಾವಾತನು ಕನಸಿನಲ್ಲಿ ಬೇಯಿಸಿದ ಅನ್ನ ಸೇವಿಸುತ್ತಾನೋ, ಬಾವಿಯಲ್ಲಿ ಅಥವಾ ಪಾತಾಳದಲ್ಲಿ ಬೀಳುತ್ತಾನೋ ಆತನು ರೋಗದಿಂದ ಪೀಡಿಸಲ್ಪಡುತ್ತಾನೆ ರೋಗಿಯಾವರೆ ಮರಣ ಹೊಂದುತ್ತಾನೆ.

ಪತತ್ರಿಭಿಃ ಪತಂಗೈಶ್ಚ ಶ್ವಾಪದೈಶ್ಚಾಭಿದರ್ಶನಮ್ ।
ಸ್ವಪ್ನೇ ಕೇಶಾಸ್ಥಿರಾಶೀನಾಂ ಭಸ್ಮನಶ್ಚಾಧಿರೋಹಣಮ್ ॥೧೬॥
ಜಲಾಶಯಾನಾಂ ಶೈಲಾನಾಂ ವನಾನಾಂ ಜ್ಯೋತಿಷಾಮಪಿ ।
ಶುಷ್ಯತಾಂ ಕ್ಷೀಯಮಾಣಾನಾಂ ಪತತಾಂ ಯಚ್ಚ
ದರ್ಶನಮ್ ॥೧೭॥

ಯಾವಾತನು ಕನಸಿನಲ್ಲಿ ಮೃಗ, ಪಕ್ಷಿ, ಪತಂಗಗಳು ತನ್ನ ಮೇಲೆ ಆಕ್ರಮಿಸಿದಂತೆ ಕಂಡರೆ, ಕೂದಲು, ಎಲುಬು ಅಥವಾ ಭಸ್ಮದ ರಾಶಿಯಲ್ಲಿ ಹತ್ತಿ ಹೋಗುವಂತೆ ಕಂಡು ಬಂದರೆ, ನೀರಿನ ಆಶ್ರಯವಿದ್ದ ಸ್ಥಳಗಳು ಬತ್ತಿ ಹೋದಂತೆ ಕಂಡು ಬಂದರೆ, ಪರ್ವತ, ವನ, ನಕ್ಷತ್ರಗಳು ಬಿದ್ದಂತೆ ಕಂಡು ಬಂದರೆ ಆತನು ಕ್ಷಯ ರೋಗದಿಂದ ಪೀಡಿಸಲ್ಪಡುತ್ತಾನೆ.

ಜ್ವರಿತಾನಾಂ ಶುನಾ ಸಖ್ಯಂ ಕಪಿಸಖ್ಯಂ ತು ಶೋಷಿಣಾಮ್ ।
ಉನ್ಮಾದೇ ರಾಕ್ಷಸೈಃ ಪ್ರೇತೈರಪಸ್ಮಾರೇ ಪ್ರವರ್ತನಮ್ ॥೧೮॥
ಮೇಹಾತಿಸಾರಿಣಾಂ ತೋಯಪಾನಂ ಸ್ನೇಹಸ್ಯ ಕುಷ್ಠಿನಾಮ್ ।
ಗುಲ್ಮೇಷು ಸ್ಥಾವರೋತ್ಪತ್ತಿಃ ಕೋಷ್ಠೇ ಮೂರ್ಧ್ನಿ ಶಿರೋರುಜಿ॥
ಶಷ್ಕುಲೀಭಕ್ಷಣಂ ಛರ್ದ್ಯಾಮಧ್ವಾ ಶ್ವಾಸಪಿಪಾಸಯೋಃ ।
ಹಾರಿದ್ರಂ ಭೋಜನಂ ವಾಪಿ ಯಸ್ಯ ಸ್ಯಾತ್ಪಾಣ್ಡು ರೋಗಿಣಃ ॥
ರಕ್ತಪಿತ್ತೀ ಪಿಬೇದ್ಯಶ್ಚ ಶೋಣಿತಂ ಸ ವಿನಶ್ಯತಿ ॥೨೦॥

1. ಜ್ವರದಿಂದ ಪೀಡಿತ ರೋಗಿಗೆ ಕನಸಿನಲ್ಲಿ ನಾಯಿಯೊಡನೆ ಮಿತ್ರತ್ವ ಮಾಡಿದಂತೆ ಕಂಡು ಬಂದರೆ, 2. ಕ್ಷಯರೋಗ ಪೀಡಿತನು ಮಂಗನೊಂದಿಗೆ ಮಿತ್ರತ್ವ ಮಾಡಿದಂತೆ, 3. ಉನ್ಮಾದದಿಂದ ಪೀಡಿತನು ರಾಕ್ಷಸರೊಂದಿಗೆ ಮಿತ್ರತ್ವ ಮಾಡಿದಂತೆ, 4. ಅಪಸ್ಮಾರ ರೋಗ ಉಳ್ಳವನು ಪ್ರೇತಗಳೊಂದಿಗೆ ಕುಣಿದಂತೆ ಸ್ವಪ್ನದಲ್ಲಿ ನೋಡಿದರೆ, 5. ಮೇಹರೋಗ ಉಳ್ಳವನು, ಅಥವಾ ಅತಿಸಾರದಿಂದ ಪೀಡಿತ ರೋಗಿಯು ನೀರನ್ನು ಕುಡಿದಂತೆ ನೋಡಿದರೆ, 6 .ಕುಷ್ಠರೋಗ ಉಳ್ಳವನು ಎಣ್ಣೆ ಕುಡಿದಂತೆ ಕಂಡು ಬಂದರೆ, 7. ಗುಲ್ಮ ರೋಗಿ ಅಥವಾ ತಲೆ ನೋವಿನಿಂದ ಪೀಡಿತನಿಗೆ ತಲೆಯಲ್ಲಿ ಮರಹುಟ್ಟಿದಂತೆ ಕಂಡು ಬಂದರೆ, 8. ವಾಂತಿ ಮಾಡುವ ರೋಗ ಉಳ್ಳವನಿಗೆ ಚಕ್ಕುಲಿ ತಿನ್ನುವುದು ಕಂಡು ಬಂದರೆ, 9. ಉಬ್ಬಸ, ಬಾಯಾರಿಕೆ ಉಳ್ಳರೋಗಿಗೆ ತಾನು ಮಾರ್ಗ

ದಲ್ಲಿ ನಡೆಯುವಂತೆ ಕಂಡುಬಂದರೆ, 10. ಪಾಣ್ಡುರೋಗ ಉಳ್ಳವನಿಗೆ ಹರಿದ್ರಾನ್ನ ತಿಂದಂತೆ ಕಂಡು ಬಂದರೆ, 11. ರಕ್ತಪಿತ್ತ ರೋಗಿಗೆ ರಕ್ತಪಾನ ಮಾಡಿದಂತೆ ಕನಸಿನಲ್ಲಿ ಕಂಡು ಬಂದರೆ. ಈ ಎಲ್ಲ ರೋಗ ಉಳ್ಳವರು ಮರಣ ಹೊಂದುತ್ತಾರೆ ಎಂದು ತಿಳಿಯಬೇಕು.

## ದುಃಸ್ವಪ್ನ ಪರಿಹಾರ ವಿಧಾನ

**ಸ್ವಪ್ನಾನೇವಂವಿಧಾನ್ ದೃಷ್ಟ್ವಾ ಪ್ರಾತರುತ್ಥಾಯ ಯತ್ನವಾನ್ ।**
**ದದ್ಯಾನ್ಮಾಷಾಂಸ್ತಿಲಾಂಲೋಹಂ ವಿಪ್ರೇಭ್ಯಃ ಕಾಂಚನಂ ತಥಾ ।**
**ಜಪೇಚ್ಚಾಪಿ ಶುಭಾನ್ ಮಂತ್ರಾನ್ ಗಾಯತ್ರೀಂ ತ್ರಿಪದಾಂ ತಥಾ ॥**
**ದೃಷ್ಟ್ವಾತು ಪ್ರಥಮೇ ಯಾಮೇ ಸುಪ್ಯಾತ್ ಧ್ಯಾತ್ವಾ ಪುನಃ ಶುಭಮ್ ॥೧॥**
**ಜಪೇದ್ಧಾನ್ಯತಮಂ ವೇದಂ ಬ್ರಹ್ಮಚಾರೀ ಸಮಾಹಿತಃ ।**
**ನ ಚಾಚಕ್ಷೀತ ಕಸ್ಯೈಚಿತ್ ದೃಷ್ಟ್ವಾ ಸ್ವಪ್ನಮಶೋಭನಮ್ ॥**
**ದೇವತಾಯತನೇ ಚೈವ ವಸೇದ್ರಾತ್ರಿತ್ರಯಂ ತಥಾ ।**
**ವಿಪ್ರಾಂಶ್ಚ ಪೂಜಯೇನ್ನಿತ್ಯಂ ದುಃಸ್ವಪ್ನಾತ್ ಪ್ರಮುಚ್ಯತೇ ॥**

ಈ ವರೆಗೆ ಹೇಳಿದ ಕೆಟ್ಟ ಕನಸುಗಳನ್ನು ನೋಡಿದವನು, ಪ್ರಾತಃಕಾಲದಲ್ಲಿ ಎದ್ದು ಪ್ರಯತ್ನಪೂರ್ವಕವಾಗಿ. ಬ್ರಾಹ್ಮಣರಿಗೆ ಉದ್ದು, ಎಳ್ಳು, ಲೋಹ ಮತ್ತು ಬಂಗಾರ ದಾನಮಾಡಬೇಕು. ಗಾಯತ್ರಿ ಮೊದಲಾದ ದೇವರ ಜಪ ಮಾಡಬೇಕು. ಮೊದಲಿನ ಯಾಮದಲ್ಲಿ ಕೆಟ್ಟಕನಸನ್ನು ನೋಡಿದವನು ಪುನಃ ನಿದ್ದೆ ಮಾಡಿ ಶೋಭನ ವಿಚಾರಗಳನ್ನು ಚಿಂತಿಸಿ, ದೇವರ ಧ್ಯಾನ ಮಾಡುತ್ತಾ, ಬ್ರಹ್ಮಚರ್ಯಪಾಲನೆ ಮಾಡಿ ಅಥವಾ ವೇದ, ಮಂತ್ರವನ್ನು ಜಪಿಸಬೇಕು. ತಾನು ಕಂಡ ಕೆಟ್ಟಕನಸನ್ನು ಯಾರೊಡನೆಯೂ ಹೇಳಬಾರದು. ಮೂರು ದಿನಗಳ ತನಕ ರಾತ್ರಿಕಾಲ ದೇವಸ್ಥಾನದಲ್ಲಿ ವಾಸಮಾಡಿ, ಬ್ರಾಹ್ಮಣ ಪೂಜನ ಮಾಡಿದರೆ ಕೆಟ್ಟ ಕನಸಿನ ಫಲದಿಂದ ಮುಕ್ತನಾಗುತ್ತಾನೆ.

## ಶುಭ ಕನಸುಗಳು

**ಸ್ವಪ್ನೇಷು ಯಃ ಸುರಾನ್ ಭೂಪಾನ್ ಜೀವಿತಃ ಸುಹೃದೋ ದ್ವಿಜಾನ್ । ಗೋಸಮಿದ್ಧಾಗ್ನಿತೀರ್ಥಾನಿ ಪಶ್ಯೇತ್ ಸುಖಮವಾಪ್ನುಯಾತ್ ॥೪॥**

ಯಾವಾತನು ಕನಸಿನಲ್ಲಿ ದೇವತೆಗಳನ್ನು ರಾಜರನ್ನು, ಬದುಕಿರುವ ತನ್ನ ಬಂಧು-ಬಾಂಧವರನ್ನು, ಬ್ರಾಹ್ಮಣರನ್ನು, ಗೋವುಗಳನ್ನು, ಉರಿಯುತ್ತಿರುವ ಬೆಂಕಿ, ತೀರ್ಥಕ್ಷೇತ್ರಗಳನ್ನು, ನೋಡಿದರೆ ಆತನಿಗೆ ಸುಖ ಲಭಿಸುತ್ತದೆ.

ತೀರ್ತ್ವಾ ಕಲುಷ ನೀರಾಣಿ ಜಿತ್ವಾ ಶತ್ರುಗಣಾನಪಿ ।
ಆರುಹ್ಯ ಸೌಧಗೋ ಶೈಲಕರಿವಾಹಾನ್ ಸುಖೀ ಭವೇತ್ ॥೫॥

ಯಾವಾತನು ಕನಸಿನಲ್ಲಿ ಕೆಸರಿನಿಂದ ಕಲುಷಿತವಾದ ನೀರಿನಿಂದ ಆವೃತ ಪ್ರದೇಶವನ್ನು ದಾಟುತ್ತಾನೋ, ಶತ್ರುಗಳನ್ನು ಜಯಿಸುತ್ತಾನೋ, ಉಪ್ಪರಿಗೆ ಹತ್ತುವುದು, ಎತ್ತು, ಆನೆ ಅಥವಾ ಪಲ್ಲಕ್ಕಿಯಲ್ಲಿ ಸವಾರಿ ಮಾಡಿದರೆ, ಪರ್ವತ ಏರಿದರೆ ಆತನಿಗೆ ಸುಖ ಲಭಿಸುತ್ತದೆ.

ಶುಭ್ರ ಪುಷ್ಪಾಣಿ ವಾಸಾಂಸಿ ಮಾಂಸಮತ್ಸ್ಯಫಲಾನಿ ಚ ।
ಪ್ರಾಪ್ಯಾತುರಃ ಸುಖೀ ಭೂಯಾತ್ ಸ್ವಸ್ಥೋಧನಮವಾಪ್ನುಯಾತ್ ॥೬॥

ಯಾವಾತನು ಕನಸಿನಲ್ಲಿ ಬಿಳಿಹೂ, ವಸ್ತ್ರ, ಮಾಂಸ, ಮೀನು, ಫಲ ಇತ್ಯಾದಿ ಪಡೆಯುತ್ತಾನೋ, ಆತನು ಸುಖವಂತನು ಆಗುತ್ತಾನೆ. ರೋಗಿಯು ಈ ಕನಸನ್ನು ಕಂಡರೆ ರೋಗಮುಕ್ತನು ಆಗುತ್ತಾನೆ. ಆರೋಗ್ಯವಂತನಾದರೆ ಧನ ಲಾಭ ಪಡೆಯುತ್ತಾನೆ.

ಅಗಮ್ಯಾಗಮನಂ ಲೇಪೋ ವಿಷ್ಟಯಾ ರುದಿತಂ ಮೃತಿ ।
ಆಮಮಾಂಸಾಶನಂ ಸ್ವಪ್ನೇ ಧನಾರೋಗ್ಯಾಪ್ತಯೇ ವಿದುಃ ॥

ಯಾವಾತನು ಕನಸಿನಲ್ಲಿ ತನಗೆ ಲಭಿಸಲು ಅಸಾಧ್ಯವಾದ ಸ್ತ್ರೀಯೊಂದಿಗೆ ಸೇರುತ್ತಾನೋ, ಮೈಗೆ ಅಮೇಧ್ಯ ಹಚ್ಚಿಕೊಳ್ಳುತ್ತಾನೋ, ರೋಧಿಸುತ್ತಾನೋ, ಮರಣ ಹೊಂದುತ್ತಾನೋ, ಬೇಯಿಸದ ಮಾಂಸ ತಿನ್ನುತ್ತಾನೋ ಆತನು ಧನ ಮತ್ತು ಆರೋಗ್ಯ ಪಡೆಯುತ್ತಾನೆ.

ಜಳೌಕಾ ಭ್ರಮರೀ ಸರ್ಪೋ ಮಕ್ಷಿಕಾವಾಪಿ ದಂಶಯೇತ್ ।
ರೋಗಿಸಭೂಯಾದುಲ್ಲಾಘಃ ಸ್ವಸ್ಥೋ ಧನಮವಾಪ್ನುಯಾತ್ ॥

ಯಾವಾತನು ಕನಸಿನಲ್ಲಿ ಜಿಗಳೆ, ದುಂಬಿ, ಸರ್ಪ, ಜೇನುನೊಣ, ಇವು ಗಳಿಂದ ಕಚ್ಚಲ್ಪಡುತ್ತಾನೋ ಆತನು ರೋಗಿಯಾದರೆ ರೋಗನಾಶ ಸಂಭವಿಸುತ್ತದೆ ಆರೋಗ್ಯವಂತನಾದರೆ ಧನ-ಸಂಪತ್ತು ಲಭಿಸುತ್ತದೆ.

ದೇವಾನ್ ದ್ವಿಜಾನ್ ಗೋವೃಷಭಾನ್ ಜೀವತಃ ಸುಹೃದೋ ನೃಪಾನ್ । ಸಮಿದ್ಧಮಗ್ನಿಂ ಸಾಧೂಂಶ್ಚ ನಿರ್ಮಲಾನಿ ಜಲಾನಿ ಚ ॥ ಪಶ್ಯೇತ್ ಕಲ್ಯಾಣಲಾಭಾಯ ವ್ಯಾಧೇರಪಗಮಾಯ ಚ ॥

ಯಾವಾತನು ಕನಸಿನಲ್ಲಿ ದೇವರನ್ನು, ಬ್ರಾಹ್ಮಣರನ್ನು, ಹಸು, ಎತ್ತು, ಬದುಕಿರುವ ಮಿತ್ರರನ್ನು, ರಾಜನನ್ನು, ಪ್ರಜ್ವಲಿಸುತ್ತಿರುವ ಬೆಂಕಿ, ಸಾಧು-ಸಜ್ಜನರನ್ನು, ನಿರ್ಮಲವಾದ ಜಲ ಇವುಗಳನ್ನು ಕಾಣುತ್ತಾನೋ ಆತನಿಗೆ ಶುಭ ಫಲ ಸಂಭವಿಸುತ್ತದೆ, ಹಾಗು ರೋಗನಾಶ ಆಗುತ್ತದೆ.

ಮಾಂಸಂ ಮತ್ಸ್ಯಾನ್ ಸ್ರಜಃ ಶ್ವೇತಾ ವಾಸಾಂಸಿ ಚ ಫಲಾನಿ ಚ । ಲಭಂತೇ ಧನಲಾಭಾಯವ್ಯಾಧೇರಪಗಮಾಯ ಚ ॥೧೦॥

ಯಾವಾತನು ಕನಸಿನಲ್ಲಿ ಮಾಂಸ, ಮೀನು, ಬಿಳಿಹೂವಿನಮಾಲೆ, ವಸ್ತ್ರ, ಹಣ್ಣು-ಹಂಪಲು, ಕಾಣುತ್ತಾನೋ ಆತನಿಗೆ ಧನಪ್ರಾಪ್ತಿ ಆಗುತ್ತದೆ, ರೋಗಿಯಾದರೆ ರೋಗನಿವಾರಣೆ ಆಗುತ್ತದೆ.

ಮಹಾಪ್ರಾಸಾದಸಫಲ ವೃಕ್ಷವಾರಣ ಪರ್ವತಾನ್ ।
ಆರೋಹೇದ್ದ್ರವ್ಯಲಾಭಾಯ ವ್ಯಾಧೇರಪಗಮಾಯ ಚ ॥

ಯಾವಾತನು ಕನಸಿನಲ್ಲಿ ದೊಡ್ಡ ಉಪ್ಪರಿಗೆ, ಫಲಭರಿತ ವೃಕ್ಷ, ಆನೆ, ಬೆಟ್ಟವನ್ನು ಏರುವುದು, ಕಾಣುತ್ತಾನೋ ಆತನಿಗೆ ಧನಲಾಭ ಆಗುತ್ತದೆ, ಮತ್ತು ಆರೋಗ್ಯ ಉಂಟಾಗುತ್ತದೆ.

ನದೀನದಸಮುದ್ರಾಂಶ್ಚ ಕ್ಷುಭಿತಾನ್ ಕಲುಷೋದಕಾನ್ ।
ತರೇತ್ ಕಲ್ಯಾಣ ಲಾಭಾಯ ವ್ಯಾಧೇರಪಗಮಾಯ ಚ ॥

ಯಾವಾತನು ಕನಸಿನಲ್ಲಿ ದೊಡ್ಡನದಿ, ಸಣ್ಣನದಿ, ಅಥವಾ ಸಮುದ್ರಗಳ ಕೊಳಕು ನೀರನ್ನು ಈಜಿಕೊಂಡು ದಾಟಿ ಹೋದಂತೆ ಕಾಣುತ್ತಾನೋ ಆತನಿಗೆ ಶುಭಫಲ ಲಭಿಸುತ್ತದೆ ಮತ್ತು ರೋಗವಿಮುಕ್ತಿ ಆಗುತ್ತದೆ.

ಉರಗೋ ವಾ ಜಲೌಕೋ ವಾ ಭ್ರಮರೋ ವಾಪಿ ಯಂ ದಶೇತ್ ।
ಆರೋಗ್ಯಂ ನಿರ್ದಿಶೇತ್ತಸ್ಯ ಧನಲಾಭಂ ಚ ಬುದ್ಧಿಮಾನ್ ॥

ಯಾವಾತನು ಕನಸಿನಲ್ಲಿ ಹಾವು, ಜಿಗಳೆ ಅಥವಾ ಮುಂಬಿಯು ಕಚ್ಚಿದಂತೆ ಕಾಣುತ್ತಾನೋ ಆತನು ರೋಗನಿವಾರಣೆ ಆಗಿ ಆರೋಗ್ಯ ಮತ್ತು ಧನಲಾಭ ಹೊಂದುತ್ತಾನೆ.

**ಗವಾಂ ಚ ಕುಂಜರಾಣಾಂ ಚ ಹಯಾನಾಂ ಚ ವೃಜೇಶ್ವರ ।**
**ಪ್ರಾಸಾದಾನಾಂ ಚ ಶೈಲಾನಾಂ ವೃಕ್ಷಾಣಾಂ ಚ ತಥೈವ ಚ ॥**
**ಆರೋಹಣಂ ಚ ಧನದಂ ಭೋಜನಂ ರೋದನಂ ತಥಾ ।**
**ಪ್ರತಿಗೃಹ್ಯ ತಥಾ ವೀಣಾಂ ಸಸ್ಯಾಢ್ಯಾಂ ಭೂಮಿಮಾಲಭೇತ್ ।.**

ಯಾವಾತನು ಕನಸಿನಲ್ಲಿ ಗೋವು, ಆನೆ, ಕುದುರೆ, ಉಪ್ಪರಿಗೆಮನೆ, ಗುಡ್ಡ, ಪರ್ವತ ಇತ್ಯಾದಿ ಎತ್ತರ ಸ್ಥಳ, ಅಥವಾ ಮರಗಳ ಮೇಲೆ ಏರುವುದು ಕಾಣುತ್ತಾನೋ, ಕನಸಿನಲ್ಲಿ ಹಣ ನೀಡುವುದು, ಊಟಮಾಡುವುದು, ರೋಧಿಸುವುದು ಅಥವಾ ವೀಣೆಯನ್ನು ತೆಗೆದುಕೊಂಡು ಬಾರಿಸುವುದು, ಇವನ್ನೆಲ್ಲಾ ನೋಡಿದರೆ ಆತನಿಗೆ ತುಂಬಾ ಸಸ್ಯಗಳು ಉಳ್ಳ ಭೂಮಿ ಲಭಿಸುತ್ತದೆ.

**ಶಸ್ತ್ರಾಸ್ತ್ರೇಣ ಯದಾ ವಿದ್ಧೋ ವ್ರಣೇನ ಕೃಮಿಣಾ ತಥಾ ।**
**ವಿಷ್ಠಯಾ ರುಧಿರೇನೈವ ಸಯುಕ್ತೋಽಪ್ಯರ್ಥವಾನ್ ಭವೇತ್ ॥**

ಯಾವಾತನು ಕನಸಿನಲ್ಲಿ ಶಸ್ತ್ರಾಸ್ತ್ರಗಳಿಂದ ಉಂಟಾದ ವ್ರಣ ಹಾಗೂ ಕ್ರಿಮಿ ಕೀಟಗಳಿಂದ ಉಂಟಾದ ವ್ರಣ, ಮಲದಿಂದ ಅಥವಾ ರಕ್ತದಿಂದ ಕೂಡಿಕೊಂಡದ್ದನ್ನು ಕಾಣುತ್ತಾನೋ ಆತನಿಗೆ ಧನಲಾಭ ಆಗುತ್ತದೆ.

**ಸ್ವಪ್ನೇಽಪ್ಯಗಮ್ಯಾಗಮನೋ ಭಾರ್ಯಾಲಾಭಂ ಕರೋತಿ ಯಃ ।**
**ಮೂತ್ರಸಿಕ್ತಃ ಪಿಬೇಚ್ಛುಕ್ರಂ ನರಕಂ ಚ ವಿಶತ್ಯಪಿ ॥೧೭॥**
**ನಗರಂ ಪ್ರವಿಶೇದ್ರಕ್ತಂ ಸಮುದ್ರಂ ವಾ ಸುಧಾಂ ಪಿಬೇತ್ ।**
**ಶುಭವಾರ್ತಾಮವಾಪ್ನೋತಿ ವಿಪುಲಂ ಚಾರ್ಥಮಾಲಭೇತ್ ॥**

ಯಾವಾತನು ಕನಸಿನಲ್ಲಿ ತಾನು ಬಯಸದ ನೀಚ ಸ್ತ್ರೀಯ ಲಾಭ ಪಡೆಯುತ್ತಾನೋ, ಮೂತ್ರಮಾಡಿ ಒದ್ದೆ ಆಗುವುದು, ಶುಕ್ರಪಾನಮಾಡುವುದು, ನರಕಲೋಕ ನೋಡುವುದು, ಪಟ್ಟಣವನ್ನು ಪ್ರವೇಶಿಸುವುದು, ರಕ್ತಸಮುದ್ರ ಅಥವಾ ಅಮೃತವನ್ನು ಕುಡಿಯುವುದು, ಕಾಣುತ್ತಾನೋ ಆತನಿಗೆ ಶುಭವಾರ್ತೆ ಮತ್ತು ಧನ ಲಭಿಸುತ್ತದೆ.

ಗಜಂ ನೃಪಂ ಸುವರ್ಣಂ ಚ ವೃಷಭಂ ಧೇನುಮೇವ ಚ ।
ದೀಪಮನ್ನಂ ಫಲಂ ಪುಷ್ಪಂ ಕನ್ಯಾಂ ಛತ್ರಂ ರಥಂ ಧ್ವಜಮ್ ॥
ಕುಟುಂಬಂ ಲಭತೇ ದೃಷ್ಟ್ವಾ ಕೀರ್ತಿಂ ಚ ವಿಪುಲಾಂ ಶ್ರಿಯಮ್ ।
ಪೂರ್ಣಕುಂಭಂ ದ್ವಿಜಂ ವಹ್ನಿಂ ಪುಷ್ಪ ತಾಂಬೂಲ ಮಂದಿರಮ್ ।
ಶುಕ್ಲ ಧಾನ್ಯಂ ನಟಿಂ ವೇಶ್ಯಾಂ ದೃಷ್ಟ್ವಾ ಶ್ರಿಯಮವಾಪ್ನುಯಾತ್।
ಗೋಕ್ಷೀರಂ ಚ ಘೃತಂ ದೃಷ್ಟ್ವಾ ಚಾರ್ಥಂ ಪುಣ್ಯಧನಂ ಲಭೇತ್ ॥

ಯಾವಾತನು ಕನಸಿನಲ್ಲಿ ಆನೆ, ಅರಸು, ಬಂಗಾರ, ಎತ್ತು, ದನ, ದೀಪ, ಅನ್ನ, ಫಲ, ಪುಷ್ಪ, ಕನ್ಯೆ, ಛತ್ರ, ರಥ, ಪತಾಕೆ, ತನ್ನ ಕುಟುಂಬದವರನ್ನು ನೋಡುತ್ತಾನೋ ಆತನಿಗೆ ಕೀರ್ತಿ ಮತ್ತು ವಿಪುಲವಾದ ಸಂಪತ್ತು ಲಭಿಸುತ್ತದೆ.

ಯಾವಾತನು ಕನಸಿನಲ್ಲಿ ಪೂರ್ಣಕುಂಭ (ನೀರಿನಿಂದ ತುಂಬಿದ ಕಲಶ ಅಥವಾ ಕೊಡ), ಬ್ರಾಹ್ಮಣ, ಅಗ್ನಿ, ಹೂ, ತಾಂಬೂಲ, ಮಂದಿರ, ಬಿಳಿ ಧಾನ್ಯ, ನಟಿ ಮತ್ತು ವೇಶ್ಯೆಯನ್ನು ಕಾಣುತ್ತಾನೋ ಆತನಿಗೆ ಸಂಪತ್ತು ಲಭಿಸುತ್ತದೆ. ದನದ ಹಾಲು, ದನದ ತುಪ್ಪ, ಇದನ್ನು ಕನಸಿನಲ್ಲಿ ನೋಡಿದರೆ ಆತನಿಗೆ ಸಂಪತ್ತು, ಪುಣ್ಯ ಮತ್ತು ಧನಲಾಭ ಆಗುತ್ತದೆ.

ಪಾಯಸಂ ಪದ್ಮಪತ್ರೇ ಚ ದಧಿ ದುಗ್ಧಂ ಘೃತಂ ಮಧು ।
ಮಿಷ್ಟಾನ್ನಂ ಸ್ವಸ್ತಿಕಂ ಭುಕ್ತ್ವಾ ಧ್ರುವಂ ರಾಜಾ ಭವಿಷ್ಯತಿ ॥

ಯಾವಾತನು ಕನಸಿನಲ್ಲಿ ಕಮಲದ ಎಲೆಯ ಮೇಲೆ ಇರುವ ಪಾಯಸ, ಮೊಸರು, ಹಾಲು, ತುಪ್ಪ, ಜೇನುತುಪ್ಪ ಮತ್ತು ಮಂಗಲ ವಚನದಿಂದ ಮೃಷ್ಟಾನ್ನ ಸೇವಿಸಿದರೆ ಆತನು ರಾಜನು ಅಥವಾ ರಾಜತುಲ್ಯನು ಆಗುತ್ತಾನೆ.

ಪಕ್ಷಿಣಾಂ ಮಾನುಷಾಣಾಂ ಚ ಭುಂಕ್ತೇ ಮಾಂಸಂ ನರೋಯದಿ।
ಬಹ್ವರ್ಥಂ ಶುಭವಾರ್ತಾಂ ಚ ಲಭತೇ ವಾಂಛಿತಂ ಫಲಮ್ ॥೨೧॥

ಯಾವಾತನು ಕನಸಿನಲ್ಲಿ ಪಕ್ಷಿಗಳ ಮಾಂಸ ಅಥವಾ ನರಮಾಂಸ ತಿನ್ನುವುದು ಕಾಣುತ್ತಾನೋ ಆತನಿಗೆ ತುಂಬಾ ಧನಲಾಭ, ಶುಭವಾರ್ತೆ ಮತ್ತು ಆತನು ಬಯಸಿದ್ದನ್ನು ಪಡೆಯುತ್ತಾನೆ.

ಛತ್ರಂ ವಾ ಪಾದುಕಾಂ ವಾಪಿ ಲಬ್ಧ್ವಾ ಧಾನ್ಯಂ ಚ ಗಚ್ಛತಿ ।
ಅಸಿಂ ಚ ನಿರ್ಮಲಂ ತೀಕ್ಷ್ಣಂ ತತ್ತಥೈವ ಭವಿಷ್ಯತಿ ॥೨೨॥

ಯಾವಾತನಿಗೆ ಕನಸಿನಲ್ಲಿ ಛತ್ರ, ಅಥವಾ ಪಾದುಕೆ ಲಭಿಸುತ್ತದೋ ಧಾನ್ಯ ಲಭಿಸುತ್ತದೋ, ನಿರ್ಮಲ ಹಾಗೂ ತೀಕ್ಷ್ಣವಾದ ಖಡ್ಗ ಲಭಿಸುತ್ತದೋ ಆತನು ಸಂಪನ್ನತೆಯನ್ನು ಪಡೆಯುತ್ತಾನೆ.

**ಹೇಲಯಾ ಸುತರೇದ್ಯೋ ಹಿ ಸ ಪ್ರಧಾನೋ ಭವಿಷ್ಯತಿ ।**
**ದೃಷ್ಟ್ವಾ ಚ ಫಲಿತಂ ವೃಕ್ಷಂ ಧನಮಾಪ್ನೋತಿ ನಿಶ್ಚಿತಮ್ ॥**

ಯಾವಾತನು ಕನಸಿನಲ್ಲಿ ಜಲಾಶಯವನ್ನು ಈಜಿ ದಾಟುತ್ತಾನೋ, ಆತನು ಮುಖಂಡನು ಆಗುತ್ತಾನೆ. ಫಲಭರಿತವಾದ ಮರವನ್ನು ಕನಸಿನಲ್ಲಿ ಕಂಡವನು ನಿಶ್ಚಯವಾಗಿ ಧನ ಪಡೆಯುತ್ತಾನೆ.

**ಸರ್ಪೇಣ ಭಕ್ಷಿತೋ ಯೋ ಅರ್ಥಲಾಭಶ್ಚ ತದ್ಭವೇತ್ । ಸ್ವಪ್ನೇ ಸೂರ್ಯಂ ವಿಧುಂ ದೃಷ್ಟ್ವಾ ಮುಚ್ಯತೇ ವ್ಯಾಧಿಬಂಧನಾತ್ ॥**

ಯಾವಾತನು ಕನಸಿನಲ್ಲಿ ಸರ್ಪದಿಂದ ನುಂಗಿದಂತೆ ಕಾಣುತ್ತಾನೋ ಆತನಿಗೆ ಧನಲಾಭ ಆಗುತ್ತದೆ. ಕನಸಿನಲ್ಲಿ ಸೂರ್ಯ ಅಥವಾ ಚಂದ್ರನನ್ನು ನೋಡಿದರೆ ಆತನು ರೋಗವಿಮುಕ್ತನು ಆಗುತ್ತಾನೆ.

**ವಡವಾಂ ಕುಕ್ಕುಟೀಂ ದೃಷ್ಟ್ವಾ ಕ್ರೌಂಚೀ ಭಾರ್ಯಾಂ ಲಭೇದ್ಧ್ರುವಮ್ । ಸ್ವಪ್ನೇ ಯೋ ನಿಗಡೈರ್ಬದ್ಧಃ ಪ್ರತಿಷ್ಠಾಂ ಪುತ್ರಮಾಲಭೇತ್ ॥೨೫॥**

ಯಾವಾತನು ಕನಸಿನಲ್ಲಿ ಹುಂಜದಿಂದ ಕೂಡಿದ ಕೋಳಿಯನ್ನು ನೋಡಿದರೆ ಆತನು ಪತ್ನಿಯನ್ನು ಪಡೆಯುತ್ತಾನೆ. ಕನಸಿನಲ್ಲಿ ಸಂಕೋಲೆಯಿಂದ ಬಂಧಿತನಾದವನು ಪ್ರತಿಷ್ಠೆಯನ್ನು ಮತ್ತು ಪುತ್ರನನ್ನು ಪಡೆಯುತ್ತಾನೆ.

**ದಧ್ಯನ್ನಂ ಪಾಯಸಂ ಭುಂಕ್ತೇ ಪದ್ಮಪತ್ರೇ ನದೀತಟೇ ।**
**ವಿಶೀರ್ಣಪದ್ಮಪತ್ರೇ ಚ ಸೋಽಪಿ ರಾಜಾ ಭವಿಷ್ಯತಿ ॥೨೬॥**

ಯಾವಾತನು ಕನಸಿನಲ್ಲಿ ಮೊಸರು, ಅನ್ನ, ಪಾಯಸ ಇವುಗಳನ್ನು ಕಮಲದ ಎಲೆಯ ಮೇಲಿಟ್ಟು, ನದೀ ತೀರದಲ್ಲಿ ಕುಳಿತುಕೊಂಡು ತಿನ್ನುತ್ತಾನೋ ಹಾಗೂ ಪೂರ್ಣಕಮಲದ ಎಲೆ ಮೇಲೆ ಇಟ್ಟು ತಿಂದರೆ ಆತನು ರಾಜತುಲ್ಯನು ಆಗುತ್ತಾನೆ.

**ಜಲೌಕಸಂ ವೃಶ್ಚಿಕಂ ಚ ಸರ್ಪಂ ಚ ಯದಿ ಪಶ್ಯತಿ ।**
**ಧನಂ ಪುತ್ರಂ ಚ ವಿಜಯಂ ಪ್ರತಿಷ್ಠಾಂ ವಾ ಲಭೇದಿತಿ ॥೨೭॥**

ಯಾವಾತನು ಕನಸಿನಲ್ಲಿ ಜಿಗುಳೆ, ಜೇಳು ಅಥವಾ ಹಾವನ್ನು ಕಂಡರೆ ಆತನಿಗೆ ಧನ, ಪುತ್ರ, ಜಯ ಅಥವಾ ಪ್ರತಿಷ್ಠೆ ಲಭಿಸುತ್ತದೆ.

**ಶೃಂಗಿಭಿರ್ದಂಷ್ಟ್ರಿಭಿಃ ಕೋಲೈರ್ವಾನರೈಃ ಪೀಡಿತೋ ಯದಿ ।**
**ನಿಶ್ಚಿತಶ್ಚ ಭವೇದ್ರಾಜಾ ಧನಂ ಚ ವಿಪುಲಂ ಭವೇತ್ ॥೨೮॥**

ಯಾವಾತನು ಕನಸಿನಲ್ಲಿ ಕೊಂಬುಗಳು ಉಳ್ಳ ಪ್ರಾಣಿಗಳಿಂದ, ಕೋರೆ ದಾಡೆಗಳು ಉಳ್ಳ ಪ್ರಾಣಿಗಳಿಂದ, ಹಂದಿಗಳಿಂದ ಅಥವಾ ಮಂಗಗಳಿಂದ ಪೀಡಿತ ನಾಗಿರುವುದನ್ನು ನೋಡಿದರೆ ಆತನು ನಿಶ್ಚಿತವಾಗಿ ರಾಜತುಲ್ಯನು ಆಗುತ್ತಾನೆ ಹಾಗೂ ವಿಪುಲವಾದ ಧನ ಲಭಿಸುತ್ತದೆ.

**ಮತ್ಸ್ಯಂ ಮಾಂಸಂ ಮೌಕ್ತಿಕಂ ಚಂ ಶಂಖಂ ಚಂದನ ಹೀರಕಮ್।**
**ಯಸ್ತು ಪಶ್ಯತಿ ಸ್ವಪ್ನಾಂತೇ ವಿಪುಲಂ ಧನಮಾಲಭೇತ್ ॥೨೯॥**

ಯಾವಾತನು ಕನಸಿನಲ್ಲಿ ಮೀನು, ಮಾಂಸ, ಮುತ್ತು, ಶಂಖ, ಚಂದನ, ವಜ್ರ ಇವುಗಳನ್ನು ನೋಡುತ್ತಾನೋ ಆತನಿಗೆ ವಿಪುಲವಾದ ಧನಲಾಭ ಆಗುತ್ತದೆ.

**ಸುರಾಂ ಚ ರುಧಿರಂ ಸ್ವರ್ಣಂ ದೃಷ್ಟ್ವಾ ವಿಷ್ಠಾಂ ಧನಂ ಲಭೇತ್ ।**
**ಪ್ರತಿಮಾಂ ಶಿವಲಿಂಗಂ ಚ ಲಭೇದ್ದೃಷ್ಟ್ವಾ ಜಯಂ ಧನಮ್ ॥**

ಯಾವಾತನು ಕನಸಿನಲ್ಲಿ ಸುರೆ, ರಕ್ತ, ಬಂಗಾರ ಮತ್ತು ಮಲವನ್ನು ನೋಡುತ್ತಾನೋ ಆತನಿಗೆ ಧನ ಲಭಿಸುತ್ತದೆ. ದೇವರ ಪ್ರತಿಮೆ ಮತ್ತು ಶಿವ ಲಿಂಗವನ್ನು ನೋಡಿದವನಿಗೆ ಜಯ ಮತ್ತು ಧನ ಲಭಿಸುತ್ತದೆ.

**ಫಲಿತಂ ಪುಷ್ಪಿತಂ ಬಿಲ್ವಮಾಮ್ರಂ ದೃಷ್ಟ್ವಾ ಲಭೇದ್ಧನಮ್ ।**
**ದೃಷ್ಟ್ವಾ ಚ ಜ್ವಲದಗ್ನಿಂ ಚ ಧನಂ ಬುದ್ಧಿಂ ಶ್ರಿಯಂ ಲಭೇತ್ ॥**

ಯಾವಾತನು ಕನಸಿನಲ್ಲಿ ಫಲ ಉಳ್ಳ ಮತ್ತು ಹೂವುಗಳಿರುವ ಬಿಲ್ವವೃಕ್ಷ ಅಥವಾ ಮಾವಿನ ಮರವನ್ನು ನೋಡುತ್ತಾನೋ ಆತನಿಗೆ ಧನಲಾಭ ಆಗುತ್ತದೆ. ಉರಿಯುವ ಬೆಂಕಿಯನ್ನು ಕನಸಿನಲ್ಲಿ ನೋಡಿದರೆ ಧನ, ಬುದ್ಧಿ, ಸ್ಥಾನ-ಮಾನ ಲಭಿಸುತ್ತದೆ.

**ಆಮಲಕಂ ಧಾತ್ರೀಫಲಮುತ್ಪಲಂ ಚ ಧನಾಗಮಮ್ ।**
**ದೇವತಾಶ್ಚ ದ್ವಿಜಾ ಗಾವಃ ಪಿತರೋ ಲಿಂಗಿನಸ್ತಥಾ ೩೨॥**
**ಯದ್ವದಾತಿ ನಿಾಥಃ ಸ್ವಪ್ನೇ ತತ್ತಥೈವ ಭವಿಷ್ಯತಿ ॥೩೩॥**

ಯಾವಾತನು ಕನಸಿನಲ್ಲಿ ನೆಲ್ಲಿಕಾಯಿ, ಧಾತ್ರಿಫಲ ಮತ್ತು ಸೈದಿಲೆಯನ್ನು ನೋಡುತ್ತಾನೋ ಆತನಿಗೆ ಧನ ಲಭಿಸುತ್ತದೆ. ದೇವತೆ, ಬ್ರಾಹ್ಮಣರು, ದನ, ಪಿತೃ ಮತ್ತು ಲಿಂಗ ಧರಿಸುವವರು ಕನಸಿನಲ್ಲಿ ನೀಡುವ ವಸ್ತು ತುಲ್ಯ ದ್ರವ್ಯವು ಆತನಿಗೆ ಲಭಿಸುತ್ತದೆ.

**ಶುಕ್ಲಾಂಬರಧರಾ ನಾರ್ಯಃ ಶುಕ್ಲಮಾಲ್ಯಾನುಲೇಪನಾಃ ।**
**ಸಮಾಶ್ಲಿಷ್ಯಂತಿ ಯಂ ಸ್ವಪ್ನೇ ತಸ್ಯ ಶ್ರೀಃ ಸ್ವಪ್ನತಃ ಸುಖಮ್ ॥**

ಯಾವಾತನು ಕನಸಿನಲ್ಲಿ ಬಿಳಿ ಉಡುಪು ಧರಿಸಿದ ಹಾಗೂ ಹೂವಿನ ಹಾರ ಧರಿಸಿ, ಅನುಲೇಪನ ಮಾಡಿದ ಹೆಂಗಸು ಆಲಂಗಿಸಿದ್ದನ್ನು ನೋಡಿದರೆ ಆತನಿಗೆ ಧನಪ್ರಾಪ್ತಿಯಾಗಿ ಸುಖ ಲಭಿಸುತ್ತದೆ.

**ಪೀತಾಂಬರಧರಾಂ ನಾರೀಂ ಪೀತಮಾಲ್ಯಾನುಲೇಪನಾಮ್ ।**
**ಅವಗೂಹತಿ ಯಃ ಸ್ವಪ್ನೇ ಕಲ್ಯಾಣಂ ತಸ್ಯ ಜಾಯತೇ ॥೩೫॥**

ಯಾವಾತನು ಕನಸಿನಲ್ಲಿ ಪೀತವಸ್ತ್ರ ಮತ್ತು ಪೀತ ಮಾಲೆಯನ್ನು ಧರಿಸಿ, ಅನುಲೇಪನ ಮಾಡಿದ ಹೆಂಗಸನ್ನು ಆಲಂಗಿಸಿ ಮುದ್ದಾಡುತ್ತಾನೋ ಆತನಿಗೆ ಶುಭಫಲ ಲಭಿಸುತ್ತದೆ.

**ಸರ್ವಾಣಿ ಶುಕ್ಲಾನಿ ಪ್ರಶಂಸಿತಾನಿ । ಭಸ್ಮಾಸ್ಥಿಕಾರ್ಪಾಸವಿವರ್ಜಿ-**
**ತಾನಿ । ಸರ್ವಾಣಿ ಕೃಷ್ಣಾನ್ಯತಿನಿಂದಿತಾನಿ । ಗೋಹಸ್ತಿವಾಜಿದ್ವಿ-**
**ಜದೇವವರ್ಜ್ಯಮ್ ॥೩೬॥**

ಯಾವಾತನು ಕನಸಿನಲ್ಲಿ ಭಸ್ಮ, ಎಲುಬು, ಹತ್ತಿ ಇವುಗಳ ಹೊರತು ಉಳಿದ ಸಕಲ ಬಿಳಿ ಪದಾರ್ಥಗಳನ್ನು ನೋಡಿದರೆ ಅವುಗಳೆಲ್ಲ ಆತನಿಗೆ ಶುಭಫಲ ದಾಯಕ ಆಗಿರುತ್ತವೆ. ದನ, ಆನೆ, ಕುದುರೆ ಮತ್ತು ದೇವತೆಗಳ ಹೊರತು ಇತರ ಕಪ್ಪು ವಸ್ತುಗಳನ್ನು ನೋಡಿದರೆ ಆತನಿಗೆ ಅತ್ಯಂತ ಅಶುಭಫಲ ಸೂಚಕ ಆಗಿರುತ್ತದೆ.

**ದಿವ್ಯಾ ಸ್ತ್ರೀ ಸಸ್ಮಿತಾ ವಿಪ್ರಾ ರತ್ನಭೂಷಣಭೂಷಿತಾ ।**
**ಯಸ್ಯ ಮಂದಿರಮಾಯಾತಿ ಸ ಪ್ರಿಯಂ ಲಭತೇ ಧ್ರುವಮ್ ॥**

ಯಾವಾತನು ಕನಸಿನಲ್ಲಿ ದಿವ್ಯ ಹಸನ್ಮುಖಳಾದ ಹಾಗೂ ರತ್ನಾದಿ ಅಲಂಕಾರ ಭೂಷಿತಳಾದ ಬ್ರಾಹ್ಮಣ ಸ್ತ್ರೀಯು ತನ್ನ ಮನೆಗೆ ಆಗಮಿಸುವುದನ್ನು ಕಾಣುತ್ತಾನೋ ಆತನಿಗೆ ತಾನಾ ಬಯಸಿದ್ದು ನಿಶ್ಚಿತವಾಗಿ ಲಭಿಸುತ್ತದೆ.

ಸ್ವಪ್ನೇ ಚ ಬ್ರಾಹ್ಮಣೋ ದೇವೋ ಬ್ರಾಹ್ಮಣೀ ದೇವಕನ್ಯಕಾ ।
ಬ್ರಾಹ್ಮಣೋ ಬ್ರಾಹ್ಮಣೀ ವಾಪಿ ಸಂತುಷ್ಟಾ ಸಸ್ಮಿತಾ ಸತೀ ॥೩೮
ಫಲಂ ದದಾತಿ ಯಸ್ಮೈ ಚ ತಸ್ಯ ಪುತ್ರೋ ಭವಿಷ್ಯತಿ ॥೩೯॥ ॥

ಯಾವಾತನು ಕನಸಿನಲ್ಲಿ ಬ್ರಾಹ್ಮಣ, ದೇವತೆ, ಬ್ರಾಹ್ಮಣ ಸ್ತ್ರೀ, ಅಥವಾ ದೇವಕನ್ನಿಕೆಯನ್ನು ನೋಡಿದರೆ ಆತನಿಗೆ ಪುತ್ರಸಂತಾನ ಆಗುತ್ತದೆ. ಬ್ರಾಹ್ಮಣ ಅಥವಾ ಬ್ರಾಹ್ಮಣ ಸ್ತ್ರೀಯು, ಸಂತುಷ್ಟ ಹಾಗೂ ಹಸನ್ಮುಖಿಯಾದ ಸಾಧ್ವಿಯು ಫಲವನ್ನು ನೀಡಿದ್ದು ಕನಸಿನಲ್ಲಿ ಕಂಡು ಬಂದರೆ ಅಂಥವನಿಗೆ ಪುತ್ರಸಂತಾನ ಆಗುತ್ತದೆ.

ಯಂ ಸ್ವಪ್ನೇ ಬ್ರಾಹ್ಮಣಾ ನಿತ್ಯಂ ಕುರ್ವಂತಿ ಚ ಶುಭಾಶಿಷಮ್ ।
ಯದ್ವದಂತಿ ಭವೇತ್ತಸ್ಯ ತಸ್ಯೈಶ್ವರ್ಯಂ ಭವೇದ್ಧ್ರುವಮ್ ॥

ಯಾವಾತನು ಕನಸಿನಲ್ಲಿ ದಿನಾಲೂ ಬ್ರಾಹ್ಮಣರಿಂದ ಆಶೀರ್ವಾದವನ್ನು ಪಡೆಯುತ್ತಾನೋ ಆತನಿಗೆ ನಿಸ್ಸಂದೇಹವಾಗಿ ಐಶ್ವರ್ಯ ಲಭಿಸುತ್ತದೆ.

ಪರಿತುಷ್ಟೋ ದ್ವಿಜಶ್ರೇಷ್ಠಶ್ಚಾಯಾತಿ ಯಸ್ಯ ಮಂದಿರಮ್ ।
ನಾರಾಯಣಃ ಶಿವೋ ಬ್ರಹ್ಮಾ ಪ್ರವಿಶೇತ್ತು ತದಾಶ್ರಯಮ್ ॥

ಸಂಪತ್ತಿಸ್ತಸ್ಯ ಭವತಿ ಯಶಶ್ಚ ವಿಪುಲಂ ಶುಭಮ್ ।
ಪದೇ ಪದೇ ಸುಖಂ ತಸ್ಯ ಸಮಾನಂ ಗೌರವಂ ಭವೇತ್ ॥೪೧॥

ಯಾವಾತನು ಕನಸಿನಲ್ಲಿ ತನ್ನ ಮನೆಗೆ ಬರುವ ಸಂತುಷ್ಟನಾದ ಬ್ರಾಹ್ಮಣ ಶ್ರೇಷ್ಠನನ್ನು ಕಾಣುತ್ತಾನೋ ಆತನಿಗೆ ಶ್ರೀಮನ್ನಾರಾಯಣ, ಶಿವ ಅಥವಾ ಬ್ರಹ್ಮನು ಅನುಗ್ರಹಿಸುತ್ತಾನೆ. ಅಲ್ಲದೇ ಆತನಿಗೆ ವಿಪುಲವಾದ ಸಂಪತ್ತು ಮತ್ತು ಯಶಸ್ಸು, ಶುಭಫಲ, ಪುನಃ ಪುನಃ ಮಾನಸನ್ಮಾನ ಮತ್ತು ಗೌರವ ಲಭಿಸುತ್ತದೆ.

ಅಕಸ್ಮಾದಪಿ ಸ್ವಪ್ನೇ ತು ಲಭತೇ ಸುರಭಿಂ ಯದಿ ।
ಭೂಮಿಲಾಭೋ ಭವೇತ್ತಸ್ಯ ಭಾರ್ಯಾ ಚಾಪಿ ಪತಿವ್ರತಾ ॥೪೨॥

ಯಾವಾತನಿಗೆ ಕನಸಿನಲ್ಲಿ ಅಕಸ್ಮಾತ್ ಪರಿಮಳ ದ್ರವ್ಯವು ಲಭಿಸಿದರೆ ಆತನಿಗೆ ಭೂಮಿಲಾಭ ಆಗುತ್ತದೆ. ಅಲ್ಲದೇ ಆತನ ಪತ್ನಿಯು ಪತಿವ್ರತೆಯು ಪತಿಯನ್ನು ಅನುಸರಿಸುವವಳು ಆಗುತ್ತಾಳೆ.

**ಕರಣೇ ಕೃತ್ವಾ ಹಸ್ತೌ ಯಂ ಮಸ್ತಕೇ ಸ್ಥಾಪಯೇದ್ಯದಿ ।**
**ರಾಜ್ಯಲಾಭೋ ಭವೇತ್ತಸ್ಯ ನಿಶ್ಚಿತಂ ವೈ ಶ್ರುತೌ ಮತಮ್ ॥೪೪॥**

ಯಾವಾತನು ಕನಸಿನಲ್ಲಿ ಕೈಗಳನ್ನು ಚಾಚಿ ಮಸ್ತಕದ ಮೇಲೆ ಗಟ್ಟಿಯಾಗಿ ಇಟ್ಟಂತೆ ಕಾಣುತ್ತಾನೋ ಆತನಿಗೆ ನಿಶ್ಚಯವಾಗಿ ರಾಜ್ಯಲಾಭ ಆಗುತ್ತದೆ ಎಂದು ಶ್ರುತಿಮತ ಆಗಿರುತ್ತದೆ.

**ಸ್ವಪ್ನೇ ತು ಬ್ರಾಹ್ಮಣಸ್ತುಷ್ಟಃ ಸಮಾಶ್ಲಿಷ್ಯತಿ ಯಂ ವ್ರಜ ।**
**ತೀರ್ಥಸ್ನಾಯೀ ಭವೇತ್ಸೋಽಪಿ ನಿಶ್ಚಿತಂ ಚ ಶ್ರಿಯಾನ್ವಿತಃ ॥೪೫॥**

ಯಾವಾತನು ಕನಸಿನಲ್ಲಿ ಸಂತುಷ್ಟನಾದ ಬ್ರಾಹ್ಮಣನಿಂದ ಆಲಿಂಗಿಸಲ್ಪಡುತ್ತಾನೋ ಆತನು ನಿಶ್ಚಿತವಾಗಿ ತೀರ್ಥಸ್ನಾನ ಮಾಡುತ್ತಾನೆ ಹಾಗೂ ಧನವಂತನು ಆಗುತ್ತಾನೆ.

**ಸ್ವಪ್ನೇ ದದಾತಿ ಪುಷ್ಪಂ ಚ ಯಸ್ಮೈ ಪುಣ್ಯವತೇ ದ್ವಿಜಃ ।**
**ಜಯಯುಕ್ತೋ ಭವೇತ್ಸೋಽಪಿ ಯಶಸ್ವೀ ಚ ಧನೀ ಸುಖೀ ॥**

ಯಾವಾತ ಪುಣ್ಯವಂತನು ಕನಸಿನಲ್ಲಿ ಬ್ರಾಹ್ಮಣನಿಂದ ಹೂವನ್ನು ಪಡೆಯುತ್ತಾನೋ ಆತನು ಜಯ ಉಳ್ಳವನು. ಯಶಸ್ವಿಯೂ, ಧನ ಮತ್ತು ಸುಖ ಪಡೆಯುವವನು ಆಗುತ್ತಾನೆ.

**ಸ್ವಪ್ನೇ ದೃಷ್ಟ್ವಾ ಚ ತೀರ್ಥಾನಿ ಸೌಧರತ್ನಗೃಹಾಣಿ ಚ ।**
**ಜಯಯುಕ್ತಶ್ಚ ಧನವಾನ್ ತೀರ್ಥಸ್ನಾಯೀ ಭವೇನ್ನರಃ ॥೪೭॥**

ಯಾವಾತನು ಕನಸಿನಲ್ಲಿ ತೀರ್ಥಸ್ಥಳಗಳನ್ನು, ಎತ್ತರವಾದ ರತ್ನಮಯ ಬೃಹತ್ ಮನೆಗಳನ್ನು ಕಾಣುತ್ತಾನೋ ಆತನಿಗೆ ಜಯ ಮತ್ತು ಧನ ಲಭಿಸುತ್ತದೆ. ಅಲ್ಲದೇ ಆತನು ತೀರ್ಥಸ್ನಾನ ಮಾಡುತ್ತಾನೆ.

**ಸ್ವಪ್ನೇ ತು ಪೂರ್ಣಕಲಶಂ ಕಶ್ಚಿತ್ ಕಸ್ಮೈ ದದಾತಿ ಚ ।**
**ಪುತ್ರಲಾಭೋ ಭವೇತ್ತಸ್ಯ ಸಂಪತ್ತಿಂ ವಾ ಸಮಾಲಭೇತ್ ॥೪೮॥**

ಯಾವಾತನು ಕನಸಿನಲ್ಲಿ ಯಾವನಾದರೂ ಒಬ್ಬನಿಂದ ಪೂರ್ಣಕಲಶವನ್ನು ಪಡೆಯುತ್ತಾನೋ ಆತನಿಗೆ ಪುತ್ರಲಾಭ ಆಗುತ್ತದೆ ಅಥವಾ ಸಂಪತ್ತು ಲಭಿಸುತ್ತದೆ.

**ಹಸ್ತೇ ಕೃತ್ವಾ ತು ಕುಡವಮಾಢಕಂ ವಾರಸುಂದರೀ ।**
**ಯಸ್ಯ ಮಂದಿರಮಾಯಾತಿ ಸ ಲಕ್ಷ್ಮೀಂ ಲಭತೇ ಧ್ರುವಮ್ ॥**

ಯಾವಾತನು ಕನಸಿನಲ್ಲಿ ಕೈಯಲ್ಲಿ ಪಾತ್ರೆಯನ್ನು ಹಿಡಿದು ತನ್ನ ಮನೆಯನ್ನು ಸೇರುವ ವೇಶ್ಯೆಯನ್ನು ಕಾಣುತ್ತಾನೋ ಆತನಿಗೆ ನಿಶ್ಚಿತವಾಗಿ ಧನ ಲಭಿಸುತ್ತದೆ.

**ದಿವ್ಯಾ ಸ್ತ್ರೀ ಯದ್ಗೃಹಂ ಗತ್ವಾ ಪುರೀಷಂ ವಿಸೃಜೇದ್ ವ್ರಜ ।**
**ಅರ್ಥಲಾಭೋ ಭವೇತ್ತಸ್ಯ ದಾರಿದ್ರ್ಯಂ ಚ ಪ್ರಯಾತಿ ಚ ॥೫೦॥**

ಯಾವಾತನು ಕನಸಿನಲ್ಲಿ ದಿವ್ಯಳಾದ ಸ್ತ್ರೀಯು ತನ್ನ ಮನೆಗೆ ಬಂದು ಮಲವಿಸರ್ಜನೆ ಮಾಡುವುದನ್ನು ಕಾಣುತ್ತಾನೋ ಆತನಿಗೆ ಧನಲಾಭ ಆಗುತ್ತದೆ. ಹಾಗೂ ಆತನು ದಾರಿದ್ರ್ಯದಿಂದ ಮುಕ್ತನಾಗುತ್ತಾನೆ.

**ಯಸ್ಯ ಗೇಹಂ ಸಮಾಯಾತಿ ಬ್ರಾಹ್ಮಣೋ ಭಾರ್ಯಯಾ ಸಹ।**
**ಪಾರ್ವತ್ಯಾ ಸಹ ಶಂಭುರ್ವಾ ಲಕ್ಷ್ಮೀನಾರಾಯಣೋಽಥವಾ ॥**

**ಬ್ರಾಹ್ಮಣೋ ಬ್ರಾಹ್ಮಣೀ ವಾಪಿ ಸ್ವಪ್ನೇ ಯಸ್ಮೈ ದದಾತಿ ಚ ।**
**ಧಾನ್ಯಂ ಪುಷ್ಪಾಂಜಲಿಂ ವಾಪಿ ತಸ್ಯ ಶ್ರೀಃ ಸರ್ವತೋಮುಖೀ ॥**

ಯಾವಾತನು ಕನಸಿನಲ್ಲಿ ಬ್ರಾಹ್ಮಣ ದಂಪತಿಗಳು, ಪಾರ್ವತೀ–ಪರಮೇಶ್ವರರು ಅಥವಾ ಲಕ್ಷ್ಮೀನಾರಾಯಣರು ತನ್ನ ಮನೆ ಸೇರಿದಂತೆ ಕಂಡು ಬಂದರೆ ಆತನಿಗೆ ಎಲ್ಲ ಕಡೆಗಳಿಂದ ಧನಾಗಮ ಆಗುತ್ತದೆ. ಹಾಗೆಯೇ ಕನಸಿನಲ್ಲಿ ಬ್ರಾಹ್ಮಣನಾಗಲೀ ಅಥವಾ ಬ್ರಾಹ್ಮಣ ಸ್ತ್ರೀಯಾಗಲೀ ಧಾನ್ಯವನ್ನು, ಪುಷ್ಪಾಂಜಲಿಯನ್ನು ನೀಡುವುದು ಕಂಡು ಬಂದರೆ ಆತನ ಸಂಪತ್ತು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದುತ್ತದೆ.

**ಮುಕ್ತಾಹಾರಂ ಪುಷ್ಪಮಾಲ್ಯಂ ಚಂದನಂ ಚ ಲಭೇದ್ವ್ರಜ ।**
**ಸ್ವಪ್ನೇ ದದಾತಿ ವಿಪ್ರಶ್ಚ ತಸ್ಯ ಶ್ರೀಃ ಸರ್ವತೋಮುಖೀ ॥೫೨॥**

ಯಾವಾತನು ಕನಸಿನಲ್ಲಿ ಬ್ರಾಹ್ಮಣನಿಗೆ ಮುತ್ತಿನಹಾರ, ಪುಷ್ಪಮಾಲೆ ಮತ್ತು ಚಂದನವನ್ನು ಕೊಡುತ್ತಾನೋ ಆತನ ಸಂಪತ್ತು ಎಲ್ಲ ಕಡೆಯಿಂದ ಅಭಿವೃದ್ಧಿ ಆಗುತ್ತದೆ.

**ಗೋರೋಚನಂ ಪತಾಕಾಂ ವಾ ಹರಿದ್ರಾಮಿಕ್ಷುದಂಡಕಮ್ ।**
**ಸಿದ್ಧಾನ್ನಂ ಚ ಲಭೇತ್ ಸ್ವಪ್ನೇ ತಸ್ಯ ಶ್ರೀಃ ಸರ್ವತೋಮುಖೀ ॥**

ಯಾವಾತನು ಕನಸಿನಲ್ಲಿ ಗೋರೋಚನ, ಪತಾಕೆ, ಅರಸಿನ, ಕಬ್ಬಿನ ದಂಡು, ಪಕ್ವಾನ್ನ ಪಡೆಯುತ್ತಾನೋ, ಆತನಿಗೆ ಸರ್ವತೋಮುಖಿ ಸಂಪತ್ತು ಲಭಿಸುತ್ತದೆ ಮತ್ತು ಅಭಿವೃದ್ಧಿ ಆಗುತ್ತದೆ.

**ಬ್ರಾಹ್ಮಣೋ ಬ್ರಾಹ್ಮಣೀ ವಾಪಿ ದದಾತಿ ಯಸ್ಯ ಮಸ್ತಕೇ ।**
**ಛತ್ರಂ ವಾ ಶುಕ್ಲಧಾನ್ಯಂ ವಾ ಸ ಚ ರಾಜಾ ಭವಿಷ್ಯತಿ ॥೫೫॥**

ಯಾವಾತನು ಕನಸಿನಲ್ಲಿ ತನ್ನ ತಲೆಯ ಮೇಲೆ ಹಿಡಿಯಲು ಬ್ರಾಹ್ಮಣ ಅಥವಾ ಬ್ರಾಹ್ಮಣ ಸ್ತ್ರೀಯಿಂದ ಕೊಡೆಯನ್ನು ಪಡೆಯುತ್ತಾನೋ ಅಥವಾ ಅವರು ಬಿಳಿ ಧಾನ್ಯವನ್ನು ತನ್ನ ತಲೆಯ ಮೇಲೆ ಹಾಕಿದ್ದನ್ನು ಕಾಣುತ್ತಾನೋ ಆತನು ರಾಜನು ಆಗುತ್ತಾನೆ.

**ಸ್ವಪ್ನೇ ರಥಸ್ಥಃ ಪುರುಷಃ ಶುಕ್ಲಮಾಲ್ಯಾನುಲೇಪನಃ ।**
**ತತ್ರಸ್ಥೋ ದಧಿ ಭುಂಕ್ತೇ ಚ ಪಾಯಸಂ ವಾ ನೃಪೋ ಭವೇತ್ ॥**

ಯಾವಾತನು ಕನಸಿನಲ್ಲಿ ಬಿಳಿ ಹೂಮಾಲೆ ಧರಿಸಿ, ಅನುಲೇಪನ ಮಾಡಿಕೊಂಡು, ರಥದಲ್ಲಿ ಕುಳಿತು ಮೊಸರು ಅಥವಾ ಪಾಯಸವನ್ನು ತಿನ್ನುವುದನ್ನು ಕಾಣುತ್ತಾನೋ, ಆತನು ರಾಜನಾಗುತ್ತಾನೆ.

**ಸ್ವಪ್ನೇ ದದಾತಿ ವಿಪ್ರಸ್ಯ ಬ್ರಾಹ್ಮಣೀ ವಾ ಸುಧಾಂ ದಧಿ ॥**
**ಪ್ರಶಸ್ತಪಾತ್ರಂ ಯಸ್ಮೈ ವಾ ಸೋಽಪಿ ರಾಜಾ ಭವೇದ್ಧ್ರುವಮ್ ॥**

ಯಾವಾತನು ಕನಸಿನಲ್ಲಿ ಬ್ರಾಹ್ಮಣ ಅಥವಾ ಬ್ರಾಹ್ಮಣ ಸ್ತ್ರೀಯಿಂದ ಅಮೃತ, ಮೊಸರು ಅಥವಾ ಪ್ರಶಂಸನೀಯ ಪಾತ್ರೆಯನ್ನು ಪಡೆಯುವುದನ್ನು ಕಾಣುತ್ತಾನೋ ಆತನು ಕೂಡಾ ರಾಜನಾಗುತ್ತಾನೆ.

**ಕುಮಾರೀ ಚಾಪ್ಯನರ್ಘೀಯಾ ರತ್ನಭೂಷಣಭೂಷಿತಾ ।**
**ಯಸ್ಯ ತುಷ್ಟ್ಯೈ ಭವೇತ್ ಸ್ವಪ್ನೇ ಸ ಭವೇತ್ ಕವಿಪಂಡಿತಃ ॥**

ಯಾವಾತನು ಕನಸಿನಲ್ಲಿ ರತ್ನಾಭರಣಭೂಷಿತ ಎಂಟು ವರ್ಷದ ಕುಮಾರಿಯನ್ನು ಕಾಣುತ್ತಾನೋ ಆತನು ಕವಿ ಹಾಗೂ ಪಂಡಿತನು ಆಗುತ್ತಾನೆ.

**ದದಾತಿ ಪುಸ್ತಕಂ ಸ್ವಪ್ನೇ ಯಸ್ಮೈ ಪುಣ್ಯವತೇ ಚ ಸಾ ।**
**ಸ ಭವೇದ್ವಿಶ್ವವಿಖ್ಯಾತಃ ಕವೀಂದ್ರಃ ಪಂಡಿತೇಶ್ವರಃ ।೫೯॥**

ಯಾವಾತನು ಕನಸಿನಲ್ಲಿ ಒಬ್ಬ ಕನ್ಯೆಯಿಂದ ಪುಸ್ತಕವನ್ನು ಪಡೆಯುತ್ತಾನೋ ಆ ಪುಣ್ಯಾತ್ಮನು ಶ್ರೇಷ್ಠ ಕವಿ ಅಥವಾ ಪಂಡಿತನಾಗಿ ಕೀರ್ತಿವಂತನು ಆಗುತ್ತಾನೆ.

**ಯಂ ಪಾಠಯತಿ ಸ್ವಪ್ನೇ ವಾ ಮಾತೇವ ಚ ಸುತಂ ಯಥಾ ।**
**ಸರಸ್ವತೀಸುತಃ ಸೋಽಪಿ ತತ್ಪರೋ ನಾಸ್ತಿ ಪಂಡಿತಃ ॥೬೦॥**

ಯಾವಾತನು ಕನಸಿನಲ್ಲಿ ಒಬ್ಬಳಿಂದ ತಾಯಿಯು ಮಗನಿಗೆ ಹೇಳಿಕೊಡುವಂತೆ ಪಾಠ ಕಲಿಸಲ್ಪಡುವಂತೆ ಕಾಣುತ್ತಾನೋ ಆತನು ಸರಸ್ವತೀ ಪುತ್ರನಂತೆ ಪಂಡಿತನು ಆಗುತ್ತಾನೆ. ಹಾಗೂ ಅವನಿಗಿಂತ ಮಿಗಿಲಾದ ಪಂಡಿತನು ಇರುವುದಿಲ್ಲ.

**ಬ್ರಾಹ್ಮಣಃ ಪಾಠಯೋದ್ಯಂ ಚ ಪಿತೇವ ಯತ್ನಪೂರ್ವಕಮ್ ।**
**ದದಾತಿ ಪುಸ್ತಕಂ ಪ್ರೀತ್ಯಾ ಸ ಚ ತತ್ಸದೃಶೋ ಭವೇತ್ ॥೬೧॥**

ಯಾವಾತನು ಕನಸಿನಲ್ಲಿ ತಂದೆಯು ಮಗನಿಗೆ ಪ್ರಯತ್ನದಿಂದ ಕಲಿಸುವಂತೆ, ಒಬ್ಬ ಬ್ರಾಹ್ಮಣನಿಂದ ಕಲಿಸಲ್ಪಡುತ್ತಾನೋ ಹಾಗೂ ಪ್ರೀತಿ ಪೂರ್ವಕವಾಗಿ ಪುಸ್ತಕವನ್ನು ಪಡೆಯುವುದನ್ನು ಕಾಣುತ್ತಾನೋ ಆತನು ಪಂಡಿತರಲ್ಲಿ ಶ್ರೇಷ್ಠನು ಆಗುತ್ತಾನೆ.

**ಪ್ರಾಪ್ನೋತಿ ಪುಸ್ತಕಂ ಸ್ವಪ್ನೇ ಪಥಿ ವಾ ಯತ್ರ ಯತ್ರ ವಾ ।**
**ಸ ಪಂಡಿತೋ ಯಶಸ್ವೀ ಚ ವಿಖ್ಯಾತಶ್ಚ ಮಹೀತಲೇ ॥೬೨॥**

ಯಾವಾತನು ಕನಸಿನಲ್ಲಿ ದಾರಿಯಲ್ಲಿ ಬಿದ್ದಿರುವ ಪುಸ್ತಕವನ್ನು ಪಡೆದಂತೆ ಕಾಣುತ್ತಾನೋ ಆತನು ಪಂಡಿತನೂ, ಯಶಸ್ವಿಯೂ ಆಗಿ ಲೋಕದಲ್ಲಿ ಪ್ರಖ್ಯಾತ ವ್ಯಕ್ತಿ ಆಗುತ್ತಾನೆ.

**ಶುಕ್ಲ ಧಾನ್ಯಯುತಾಂ ಭೂಮಿಂ ಯಸ್ಮೈ ವಿಪ್ರಃ ಸಮುತ್ಸೃಜೇತ್,**
**ಸ್ವಪ್ನೇಽಪಿ ಪರಿತುಷ್ಟಶ್ಚ ಸ ಭವೇತ್ ಪೃಥಿವೀ ಪತಿಃ ॥೬೬॥**

ಯಾವಾತನು ಕನಸಿನಲ್ಲಿ ಒಬ್ಬ ಬ್ರಾಹ್ಮಣನಿಂದ ಶುಕ್ಲ ಧಾನ್ಯದಿಂದ ಕೂಡಿದ ಭೂಮಿಯನ್ನು ಪಡೆದು ಸಂತುಷ್ಟನಾದಂತೆ ಕಾಣುತ್ತಾನೋ ಆತನಿಗೆ ನಿಶ್ಚಿತವಾಗಿ ಭೂಮಿಲಾಭ ಆಗುತ್ತದೆ.

**ಸ್ವಪ್ನೇ ವಿಪ್ರೋ ರಥೇ ಕೃತ್ವಾ ನಾನಾಸ್ವರ್ಗಂ ಪ್ರದರ್ಶಯೇತ್ ।**
**ಚಿರಂಜೀವೀ ಭವೇದಾಯುರ್ಧನವೃದ್ಧಿರ್ಭವೇದ್ಧ್ರುವಮ್ ॥**

ಯಾವಾತನು ಕನಸಿನಲ್ಲಿ ರಥದಲ್ಲಿ ಕೂತುಕೊಂಡ ಬ್ರಾಹ್ಮಣನಿಂದ ತರತರದ ಸ್ವರ್ಗವನ್ನು ತೋರಿಸಲ್ಪಟ್ಟಂತೆ ಕಾಣುತ್ತಾನೋ ಆತನಿಗೆ ನಿಶ್ಚಿತವಾಗಿ ಧನ ಮತ್ತು ಆಯುಷ್ಯ ವೃದ್ಧಿಯಾಗುತ್ತದೆ. ಹಾಗೂ ಆತನು ಚಿರಂಜೀವಿಯಾಗುತ್ತಾನೆ.

**ವಿಪ್ರಾಯ ವಿಪ್ರಃ ಸಂತುಷ್ಟೋ ಯಸ್ಮೈ ಕನ್ಯಾಂ ದದಾತಿ ಚ ।**
**ಸ್ವಪ್ನೇ ಚ ಸ ಭವೇನ್ನಿತ್ಯಂ ಧನಾಢ್ಯೋ ಭೂಪತಿಃ ಸ್ವಯಮ್ ॥**

ಯಾವ ಬ್ರಾಹ್ಮಣನು ಕನಸಿನಲ್ಲಿ ಸಂತುಷ್ಟನಾದ ಬ್ರಾಹ್ಮಣನಿಂದ ತನ್ನ ಮಗಳನ್ನು ಪಡೆದಂತೆ ಕಾಣುತ್ತಾನೋ ಆತನು ಧನವಂತನಾಗಿ ತನ್ನ ಸಂಪಾದನೆಯಿಂದ ಭೂಮಿಯ ಒಡೆಯನಾಗಿ ಸದಾಕಾಲ ಬಾಳುತ್ತಾನೆ.

**ಸ್ವಪ್ನೇ ಸರೋವರಂ ದೃಷ್ಟ್ವಾ ಸಮುದ್ರಂ ವಾ ನದೀಂ ನದಮ್ ।**
**ಶುಕ್ಲಾಹಿಂ ಶುಕ್ಲಶೈಲಂ ಚ ದೃಷ್ಟ್ವಾ ಶ್ರಿಯಮವಾಪ್ನುಯಾತ್ ॥**

ಯಾವಾತನು ಕನಸಿನಲ್ಲಿ ಸರೋವರ, ಸಮುದ್ರ, ನದಿ, ಸಣ್ಣನದಿ, ಬಿಳಿ ಹಾವು, ಬಿಳಿಪರ್ವತ, ಇವುಗಳನ್ನು ಕಂಡರೆ ಆತನಿಗೆ ಧನ-ಸಂಪತ್ತು ಲಭಿಸುತ್ತದೆ.

**ಯಃ ಪಶ್ಯತಿ ಮೃತಂ ಸ್ವಪ್ನೇ ಸ ಭವೇಚ್ಚಿರಜೀವಿ ಚ ।**
**ಅರೋಗೋ ರೋಗಿಣಂ ದುಃಖೀ ಸುಖಿನಂ ಚ ಸುಖೀ ಭವೇತ್ ॥**

ಯಾವಾತನು ಕನಸಿನಲ್ಲಿ ಸತ್ತವನನ್ನು ನೋಡುತ್ತಾನೋ ಆತನು ಚಿರಂಜೀವಿ ಆಗುತ್ತಾನೆ. ಯಾವಾತನು ರೋಗಿಯನ್ನು ಕಾಣುತ್ತಾನೋ, ಅವನು ರೋಗ ರಹಿತನು ಆಗುತ್ತಾನೆ. ಯಾವಾತನು ಸುಖವಂತನನ್ನು ಕಾಣುತ್ತಾನೋ ಆತನು ದುಃಖಿತನು ಮತ್ತು ದುಃಖಿತನನ್ನು ಕನಸಿನಲ್ಲಿ ನೋಡಿದವನು ಸುಖವಂತನೂ ಆಗುತ್ತಾನೆ.

**ದಿವ್ಯಾ ಸ್ತ್ರೀ ಯಂ ಪ್ರವದತಿ ಮಮ ಸ್ವಾಮೀ ಭವಾನಿತಿ ।**
**ಸ್ವಪ್ನೇ ದೃಷ್ಟ್ವಾ ಚ ಜಾಗರ್ತಿ ಸ ಚ ರಾಜಾ ಭವೇದ್ಧ್ರುವಮ್ ॥**

ಯಾವಾತನು ಕನಸಿನಲ್ಲಿ ಒಬ್ಬ ದಿವ್ಯ ಸ್ತ್ರೀಯಿಂದ ತನ್ನ ಸ್ವಾಮಿ ಎಂದು ಉದ್ದೇಶಿಸಿ ಹೇಳಲ್ಪಡುತ್ತಾನೋ ಆತನಿಗೆ ಕೂಡಲೇ ಎಚ್ಚರವಾದರೆ ಅವನು ರಾಜನಾಗುತ್ತಾನೆ.

**ಸ್ವಪ್ನೇ ವಾ ಕಾಲಿಕಾಂ ದೃಷ್ಟ್ವಾ ಲಬ್ಧ್ವಾ ಸ್ಫಟಿಕಮಾಲಿಕಾಮ್ ।**
**ಇಂದ್ರಚಾಪಂ ಶಕ್ರಧ್ವಜಂ ಸ ಪ್ರತಿಷ್ಠಾಂ ಲಭೇದ್ಧ್ರುವಮ್ ॥**

ಯಾವಾತನು ಕನಸಿನಲ್ಲಿ ಕಾಳಿಯನ್ನು ಕಂಡು ಸ್ಫಟಿಕ ಮಾಲೆಯನ್ನು ಪಡೆದರೆ ಅಥವಾ ಇಂದ್ರಧನು ಅಥವಾ ಇಂದ್ರಧ್ವಜವನ್ನು ಪಡೆದಂತೆ ಕಂಡರೆ ಆತನಿಗೆ ಸ್ಥಾನ-ಮಾನ ಲಭಿಸುತ್ತದೆ.

**ಸ್ವಪ್ನೇ ವದತಿ ಯಂ ವಿಪ್ರೋ ಮಮ ದಾಸೋ ಭವೇತಿ ಚ ।**
**ಹರಿದಾಸ್ಯಂ ಚ ಮದ್ಭಕ್ತಿಂ ಸ ಲಬ್ಧ್ವಾ ವೈಷ್ಣವೋ ಭವೇತ್ ॥**

ಯಾವಾತನು ಕನಸಿನಲ್ಲಿ ಬ್ರಾಹ್ಮಣನಿಂದ "ನನ್ನ ದಾಸನಾಗು" ಎಂದು ಹೇಳಿದಂತೆ ಕಾಣುತ್ತಾನೋ ಆತನು ಹರಿದಾಸನಾಗಿ, ಹರಿಯಲ್ಲಿ ಭಕ್ತಿಉಳ್ಳವನೂ ಆಗಿ ವೈಷ್ಣವನು ಆಗುತ್ತಾನೆ.

**ಸ್ವಪ್ನೇ ವಿಪ್ರೋ ಹರಿಃ ಶಂಭುರ್ಬ್ರಾಹ್ಮಣೀ ಕಮಲಾ ಶಿವಾ ।**
**ಶುಕ್ಲಾಸ್ತ್ರೀ ವೇದಮಾತಾ ವಾ ಜಾಹ್ನವೀ ವಾ ಸರಸ್ವತೀ ॥೭೪॥**

**ಗೋಪಾಲಿಕಾ ವೇಷಧರಾ ಬಾಲಿಕಾ ರಾಧಿಕಾ ಮಮ ।**
**ಬಾಲಶ್ಚ ಬಾಲಗೋಪಾಲಃ ಸ್ವಪ್ನವಿದ್ಭಿಃ ಪ್ರಕಾಶಿತಃ ॥೭೫॥**

ಯಾವಾತನು ಕನಸಿನಲ್ಲಿ ಬ್ರಾಹ್ಮಣ, ಹರಿ, ಈಶ್ವರ, ಬ್ರಾಹ್ಮಣ ಸ್ತ್ರೀ, ಲಕ್ಷ್ಮಿ, ಪಾರ್ವತಿ, ಬಿಳಿ ಹೆಂಗಸು, ಗಾಯತ್ರಿ, ಗಂಗಾ, ಸರಸ್ವತೀ, ಗೋವಳ ಸ್ತ್ರೀಯಂತೆ ವೇಷ ಧರಿಸಿದವಳು, ಬಾಲಿಕೆ, ರಾಧ, ಬಾಲಕ, ಬಾಲಕೃಷ್ಣ ಇವರನ್ನು ಕಂಡರೆ ಆತನು ವಿಖ್ಯಾತನು ಆಗುತ್ತಾನೆ.

ಅತಃ ಪರಂ ಪ್ರವಕ್ಷ್ಯಾಮಿ ಸ್ವಪ್ನೇ ದೃಷ್ಟೇ ಫಲಾಫಲಮ್ ।
ಆದಿತ್ಯಮಂಡಲಂ ಸ್ವಪ್ನೇ ಚಂದ್ರಂ ವಾ ಯದಿ ಸಪ್ರಭಮ್ ॥೧॥
ಪಶ್ಯೇದ್ರೋಗಾದ್ವಿಮುಚ್ಯೇತ ಮಹತೀಂ ಶ್ರಿಯಮಾಪ್ನುಯಾತ್ ।

ಯಾವಾತನು ಕನಸಿನಲ್ಲಿ ಸೂರ್ಯಮಂಡಲ ಅಥವಾ ಚಂದ್ರನನ್ನು ಕಾಣುತ್ತಾನೋ ಆತನು ರೋಗ ವಿಮುಕ್ತನಾಗಿ ವಿಪುಲವಾದ ಧನ-ಸಂಪತ್ತನ್ನು ಪಡೆಯುತ್ತಾನೆ.

ಆದಿತ್ಯಮಂಡಲಂ ವಾಪಿ ಚಂದ್ರಮಂಡಲಮೇವ ವಾ ॥೨॥
ಸ್ವಪ್ನೇ ಗೃಹ್ಣಾತಿ ಹಸ್ತಾಭ್ಯಾಂ ರಾಜ್ಯಂ ಸಂಪ್ರಾಪ್ನುಯಾನ್ನರಃ ।

ಯಾವಾತನು ಕನಸಿನಲ್ಲಿ ತನ್ನ ಕೈಯಿಂದ ಸೂರ್ಯ ಮಂಡಲ ಅಥವಾ ಚಂದ್ರ ಮಂಡಲವನ್ನು ಹಿಡಿಯುವುದನ್ನು ಕಾಣುತ್ತಾನೋ ಆತನಿಗೆ ರಾಜ್ಯ ಪ್ರಾಪ್ತಿ ಆಗುತ್ತದೆ.

ಸಫಲಂ ಚ ಮಹಾವೃಕ್ಷಂ ವನಂ ಚ ಸಫಲಂ ಮಹತ್ ॥೩॥
ಪರ್ವತಂ ವಾ ಸಕಾಂತಾರಂ ದೃಷ್ಟ್ವಾ ಸ್ವಪ್ನೇ ಶ್ರಿಯಂ ಲಭೇತ್ ।
ಆರೋಹಣೇನ ಚೈತೇಷಾಂ ಶ್ರಿಯಮಾಪ್ನೋತ್ಯನುತ್ತಮಾಮ್ ॥

ಯಾವಾತನು ಕನಸಿನಲ್ಲಿ ಫಲಭರಿತ ಮಹಾವೃಕ್ಷವನ್ನು ಕಾಣುತ್ತಾನೋ, ವನ, ಪರ್ವತ ಅಥವಾ ರಮಣೀಯ ಸ್ಥಳ ಕಾಣುತ್ತಾನೋ ಆತನಿಗೆ ಧನ ಸಂಪತ್ತು ಲಭಿಸುತ್ತದೆ. ಅಥವಾ ಫಲಭರಿತ ವೃಕ್ಷ ಉಳ್ಳ ವನವನ್ನು ದಾಟುವುದು, ಪರ್ವತವನ್ನು ಹತ್ತುವುದು, ಸ್ವಪ್ನದಲ್ಲಿ ಕಂಡರೆ ಆತನಿಗೆ ಉತ್ತಮವಾದ ವಿಧಾನದಿಂದ ಧನ-ಸಂಪತ್ತು ಲಭಿಸುತ್ತದೆ.

ಆಮ್ರಂ ಚ ತಿಸ್ತ್ರಿಣೀವೃಕ್ಷಂ ಕ್ರಮುಕಾಮಲಕಂ ತಥಾ
ನಾಳಿಕೇರಂ ಮಹಾವೃಕ್ಷಂ ವನ್ಯಂ ಬಹುಫಲಂ ತಥಾ ॥೪॥
ಆರುಹ್ಯ ತತ್ಫಲಂ ಗ್ರಾಹ್ಯಂ ಮಹದ್ಧನಮವಾಪ್ನುಯಾತ್ ।
ಯತ್ಕಿಂಚಿದುಚ್ಚಮಾರುಹ್ಯ ಸ್ವಪ್ನೇ ವೃದ್ಧಿಮವಾಪ್ನುಯಾತ್ ॥೬॥

ಯಾವಾತನು ಕನಸಿನಲ್ಲಿ ಮಾವಿನ ಮರ, ಹುಣಿಸೆ ಮರ, ಅಡಿಕೆ ಮರ, ನೆಲ್ಲಿಮರ, ತೆಂಗಿನಮರ ಹತ್ತುವುದನ್ನು ಕಾಣುತ್ತಾನೋ ಅಥವಾ ಅವುಗಳ ಹಣ್ಣು ಹೆಕ್ಕುವುದನ್ನು ಕಾಣುತ್ತಾನೋ ಆತನಿಗೆ ವಿಪುಲವಾದ ಧನ-ಸಂಪತ್ತು ಲಭಿಸುತ್ತದೆ. ಹಾಗೂ ಆತನು ಅಭಿವೃದ್ಧಿ ಹೊಂದುತ್ತಾನೆ.

**ಅನ್ಯತ್ರ ಯೂಪಂ ವಲ್ಮೀಕಂ ಶ್ವೇತಾಂಗರ್ಹಿತ ಪಾದಪಾನ್ ।**

ಯಾವಾತನು ಕನಸಿನಲ್ಲಿ ಧ್ವಜಸ್ತಂಭ, ಹುತ್ತ, ಬಿಳಿವೃಕ್ಷ ಇವುಗಳ ಹೊರತು ಬೇರೆ ಯಾವುದಾದರೂ ವೃಕ್ಷಾದಿ ಹತ್ತುವುದು ಅಭಿವೃದ್ಧಿಯನ್ನು ಸೂಚಿಸುತ್ತದೆ.

**ಪಿಬೇತ್ಸಾಗರಮುಕ್ಷೋಭ್ಯಂ ಸಜಲಾಂ ಸರಿತಂ ಪಿಬೇತ್ ॥೭॥**
**ತೃಷ್ಣಯಾ ಯೋ ವಿಬುದ್ಧ್ಯೇತ ಸಾ ರಾಜ್ಯಂ ಲಭತೇ ನರಃ ।**

ಯಾವಾತನು ಕನಸಿನಲ್ಲಿ ಸಮುದ್ರ ಅಥವಾ ನದಿಯ ನೀರನ್ನು ತನ್ನ ಬಾಯಾರಿಕೆ ನೀಗಿಸಲು ಕುಡಿಯುವುದನ್ನು ಕಾಣುತ್ತಾನೋ ಆತನಿಗೆ ರಾಜ್ಯ ಲಭಿಸುತ್ತದೆ.

**ಸಾಗರಂ ಸರಿತಂ ವಾಪಿ ತೀರ್ತ್ವಾ ಯಸ್ತು ಪ್ರಬುಧ್ಯತೇ ॥೮॥**
**ತೀರ್ಣಂ ಭಯಂ ವಿಜಾನೀಯಾತ್ಸ್ವಪ್ನಾಂತೇಷು ಧ್ರುವಂ ನರಃ ।**

ಯಾವಾತನು ಕನಸಿನಲ್ಲಿ ಸಮುದ್ರ ಅಥವಾ ನದಿಯನ್ನು ದಾಟಿದಂತೆ ಕಾಣುತ್ತಾನೋ ಆತನು ಸ್ವಪ್ನಾಂತ್ಯದಲ್ಲಿ ಸಕಲ ಭಯ ವಿಮುಕ್ತನು ಆಗುತ್ತಾನೆ.

**ಪೂವಂ ಚ ಸಾಗರಂ ಕ್ಷುಬ್ಧಂ ಸರ್ವಾಶ್ಚ ಸರಿತೋಽಪಿ ವಾ ॥೯॥**
**ದೃಷ್ಟ್ವಾ ಶ್ರಿಯಮವಾಪ್ನೋತಿ ರಾಜ್ಯಂ ಯದ್ವಾ ತತೋ ಲಭೇತ್।**

ಯಾವಾತನು ಕನಸಿನಲ್ಲಿ ಶಾಂತವಾಗಿರುವ ಸಮುದ್ರ ಅಥವಾ ನದಿಯನ್ನು ಕಾಣುತ್ತಾನೋ ಆತನಿಗೆ ಧನ-ಸಂಪತ್ತು ಅಥವಾ ರಾಜ್ಯ ಲಭಿಸುತ್ತದೆ.

**ಮಾತರಂ ಪಿತರಂ ಪುತ್ರಾಂದ್ವಿಜಾದ್ಬಂಧೂನ್ಸುಹೃಜನಾನ್ ॥೧೦॥**
**ಯದಿ ಪಶ್ಯೇಚ್ಛ್ರಿಯಂ ಸ್ವಪ್ನೇ ವಿಪುಲಾಂ ಶ್ರಿಯಮಾಪ್ನುಯಾತ್।**

ಯಾವಾತನು ಕನಸಿನಲ್ಲಿ ತನ್ನ ತಂದೆ, ತಾಯಿ, ಪುತ್ರ, ಬ್ರಾಹ್ಮಣರನ್ನು ಕಾಣುತ್ತಾನೋ ಆತನಿಗೆ ಧನ ಮತ್ತು ಹೇರಳ ಸಂಪತ್ತು ಲಭಿಸುತ್ತದೆ.

**ಸುರಾಂ ಪಿಬತಿ ಯಃ ಸ್ವಪ್ನೇ ತೃಗಛ್ಯಂ ಚಾಪಿ ಗಚ್ಛತಿ ॥೧೧॥**
**ಅಚಿರೇಣೈವ ಕಾಲೇನ ಕಲ್ಯಾಣಂ ತಸ್ಯ ನಿರ್ದಿಶೇತ್ ।**

ಯಾವಾತನು ಕನಸಿನಲ್ಲಿ ಸುರಾಪಾನ ಮಾಡುವುದು, ಸ್ತ್ರೀ ಸಂಗ ಮಾಡುವುದು ಕಾಣುತ್ತಾನೋ ಆತನಿಗೆ ಶೀಘ್ರವಲ್ಲಿಯೇ ಶುಭಕಾಲ ಪ್ರಾಪ್ತಿ ಆಗುತ್ತದೆ.

**ಉತ್ತಮಂ ರೂಪಸಂಪನ್ನಂ ಪುರುಷಂ ಶುಕ್ಲವಾಸಸಮ್ ॥೧೨॥**
**ಸ್ತ್ರೀಯಂ ವಾ ತಾದೃಶೀಂ ಸ್ವಪ್ನೇ ಯದಿ ಪಶ್ಯೇದ್ಧನಾಗಮಃ ।**

ಯಾವಾತನು ಕನಸಿನಲ್ಲಿ ಕುಲೀನ, ರೂಪವಂತನಾದ ಹಾಗೂ ಬಿಳಿ ಉಡುಪನ್ನು ಧರಿಸಿದ ಪುರುಷನನ್ನು ಕಂಡರೆ ಆತನಿಗೆ ಧನಾಗಮ ಆಗುತ್ತದೆ.

**ಮನುಷ್ಯಕಾಕಮತ್ಸ್ಯಾನಾಂ ಶವಂ ಮಾಂಸಂ ಸ್ಪೃಶೇದ್ಯದಿ ॥೧೩॥**
**ರಕ್ತಂ ವರಾಙ್ಗನಾಶ್ಚಾಪಿ ಮಹದ್ಧನಮವಾಪ್ನುಯಾತ್ ।**

ಯಾವಾತನು ಕನಸಿನಲ್ಲಿ ಕಾಗೆ, ಮೀನು, ಶವ, ಮಾಂಸ, ರಕ್ತ ಅಥವಾ ವೇಶ್ಯೆಯನ್ನು ಸ್ಪರ್ಶಿಸುತ್ತಾನೋ ಆತನಿಗೆ ಹೇರಳ ಧನ ಲಭಿಸುತ್ತದೆ.

**ಶುಕ್ಲಾಂಬರಧರಾ ನಾರೀ ಶುಕ್ಲಮಾಲ್ಯಾ ಸುಗಂಧಿನೀ ॥೧೪॥**
**ಶಯ್ಯಾಮಾರೋಹಯೇತ್ಸ್ವಪ್ನೇ ಮಹತೀಂ ಶ್ರಿಯಮಾಪ್ನು-**
**ಯಾತ್ ।**

ಯಾವಾತನಿಗೆ ಕನಸಿನಲ್ಲಿ ಬಿಳಿವಸ್ತ್ರ, ಪರಿಮಳದ್ರವ್ಯ ಮತ್ತು ಬಿಳಿಮಾಲೆ ಧರಿಸಿದ ಸ್ತ್ರೀಯು ಹಾಸಿಗೆಯಲ್ಲಿ ಶಯನ ಮಾಡಲು ಪತ್ನಿವಂತೆ ಕಂಡು ಬಂದರೆ ಆತನಿಗೆ ವಿಪುಲವಾದ ಧನ ಲಭಿಸುತ್ತದೆ.

**ಕನ್ಯಾಂ ಪಂಕಜಹಸ್ತಾಂ ಚ ಗೌರೀಂ ಚೈವಾಪಿ ತಾದೃಶೀಮ್ ॥**
**ಸ್ವಪ್ನೇ ದೃಷ್ಟ್ವಾ ನರಃ ಶೀಘ್ರಂ ಲಕ್ಷ್ಮೀಂ ಸಂಪ್ರಾಪ್ನುಯಾದ್ಧ್ರು-**
**ವಮ್ ।**

ಯಾವಾತನು ಕನಸಿನಲ್ಲಿ ಕೈಯಲ್ಲಿ ಕಮಲದ ಹೂ ಹಿಡಿದ ಕನ್ಯೆ ಅಥವಾ ಗೌರಿ ಅಂದರೆ ಹತ್ತು ವರ್ಷದ ಪ್ರಾಯದ ಹುಡುಗಿಯನ್ನು ಕಾಣುತ್ತಾನೋ ಆತನಿಗೆ ಶೀಘ್ರದಲ್ಲಿಯೇ ಧನ ಲಭಿಸುತ್ತದೆ.

**ಯಸ್ತು ಪ್ರಪಶ್ಯತಿ ಸ್ವಪ್ನೇ ರಾಜಾನಂ ಕುಂಜರಂ ಹಯಮ್॥೧೬॥**
**ಸುವರ್ಣಂ ವೃಷಭಂ ಗಾಂ ಚ ಕುಟುಂಬಂ ತಸ್ಯ ವರ್ಧತೇ ।**

ಯಾವಾತನು ಕನಸಿನಲ್ಲಿ ರಾಜ, ಆನೆ, ಕುದುರೆ, ಬಂಗಾರ, ಎತ್ತು, ದನ ಕಾಣುತ್ತಾನೋ ಆತನ ಕುಟುಂಬ ಅಭಿವೃದ್ಧಿ ಹೊಂದುತ್ತದೆ.

**ಬಾಲಕಾನ್ಕುಕ್ಕುಟಾಂಶ್ಚೈವ ಮೃಗಾಂಶ್ಚ ವನಪಾದಪಾನ್ ॥೧೭॥**
**ಸುವರ್ಣಂಪಕ್ಷಿಣಶ್ಚೈವ ದೃಷ್ಟ್ವಾ ತು ಲಭತೇ ಶ್ರಿಯಮ್ ।**

ಯಾವಾತನು ಕನಸಿನಲ್ಲಿ ಕೊಕ್ಕರೆ, ಕೋಳಿ, ಜಿಂಕೆ, ಅಥವಾ ಬಂಗಾರ ವರ್ಣದ ಪಕ್ಷಿಯನ್ನು ಕಾಣುತ್ತಾನೋ ಆತನಿಗೆ ಧನ ಲಭಿಸುತ್ತದೆ.

ಪ್ರಾಸಾದಂ ವಾ ಪ್ರಭೂತಂ ವಾ ರಾಜಾನಂ ಸರ್ವಪೂಜಿತಮ್ ॥
ದೃಷ್ಟ್ವಾಪ್ನೋತಿ ಶ್ರಿಯಂ ಸ್ವಪ್ನೇ ದೇವಾನಾಂ ಚಾಪಿ ಭಾಷಣಮ್।

ಯಾವಾತನು ಕನಸಿನಲ್ಲಿ ಉಪ್ಪರಿಗೆ ಮನೆ, ಸಕಲರಿಂದ ಪೂಜಿಸಲ್ಪಡುವ ರಾಜನನ್ನು ಮತ್ತು ದೇವತೆಗಳು ಮಾತಾಡುವುದನ್ನು ಕಾಣುತ್ತಾನೋ ಆತನಿಗೆ ಧನ ಲಭಿಸುತ್ತದೆ.

ಗೃಹಧಿಷ್ಟ್ಯಾದಿಕರಣಂ ಕುಲಗೋತ್ರಶ್ರಿಯೋಽಪಿ ವಾ ॥೧೯॥
ವೃಕ್ಷಾರಾವಾದಿಕರಣಂ ಸ್ಥಿತಿಪ್ರದಮಿಹೋಚ್ಯತೇ ।

ಯಾವಾತನು ಕನಸಿನಲ್ಲಿ ಮನೆ ಇತ್ಯಾದಿ ಕಟ್ಟುವುದು, ಅಥವಾ ಯಾವುದಾದರೂ ಕುಟುಂಬದ, ಕುಲದ ಜನರಿಗೆ ಸನ್ಮಾನ ಮಾಡುವುದು, ಮರ ನೆಡುವುದು ಅಥವಾ ಗದ್ದೆ ಉಳುವುದು ಕಾಣುತ್ತಾನೋ ಆತನಿಗೆ ಉತ್ತಮ ಸ್ಥಾನ–ಮಾನ, ಕೀರ್ತಿ ಲಭಿಸುತ್ತದೆ.

ಉತ್ಪಲಂ ಕಮಲಂ ಶುಕ್ಲಮಾಲ್ಯಮಾಭರಣಂ ತಥಾ ॥೨೦॥
ಅಗರುಂ ಚಾಪಿ ಯಃ ಸ್ವಪ್ನೇ ಲಭತೇ ಸ ಸುಖೀ ಭವೇತ್ ।

ಯಾವಾತನು ಕನಸಿನಲ್ಲಿ ನೀರಿನಲ್ಲಿ ಉದ್ಭವಿಸಿದ ಗಿಡ, ಕಮಲದ ಹೂ, ಬಿಳಿಮಾಲೆ, ಆಭರಣ, ಅಗರು, ಪಡೆಯುತ್ತಾನೋ ಆತನು ಸುಖವಂತನು ಆಗುತ್ತಾನೆ.

ಗೋಶಕೃಚ್ಛಮಲಂ ವಾಪಿ ಆಮ್ರಸ್ಯಾಪಿ ಫಲಂ ತಥಾ ॥೨೧॥
ರಕ್ತಮಾಲ್ಯಂ ಶವಂ ವಾಪಿ ದೃಷ್ಟ್ವಾ ಶ್ರಿಯಮವಾಪ್ನುಯಾತ್ ।

ಯಾವಾತನು ಕನಸಿನಲ್ಲಿ ಸಗಣಿ, ಮಲ, ಮಾವಿನ ಹಣ್ಣು, ರಕ್ತಸಿಕ್ತ ಮಾಲೆ ಮತ್ತು ಶವವನ್ನು ನೋಡುತ್ತಾನೋ ಆತನಿಗೆ ಧನಪ್ರಾಪ್ತಿ ಆಗುತ್ತದೆ.

ಸೋಮಪಾನಂ ಸುರಾಪಾನಂ ಸ್ವಪ್ನೇ ವಿಪ್ರಸ್ಯ ದರ್ಶನಮ್ ॥
ಭಕ್ಷಣಂಚಾಪ್ಯಮೇಧ್ಯಾನಾಂ ಧನಲಾಭಾಯ ಕಲ್ಪತೇ ।

ಯಾವಾತನು ಕನಸಿನಲ್ಲಿ ಸೋಮರಸ ಅಥವಾ ಮದ್ಯವನ್ನು ಕುಡಿಯುತ್ತಾನೋ, ಅಥವಾ ಬ್ರಾಹ್ಮಣನ ದರ್ಶನ ಮಾಡುತ್ತಾನೋ. ಭಕ್ಷ್ಯ-ಭೋಜ್ಯ, ಕಳ್ಳು ಇತ್ಯಾದಿ ಕನಸಿನಲ್ಲಿ ಸೇವಿಸುವುದರಿಂದ ಆತನಿಗೆ ಧನಲಾಭ ಆಗುತ್ತದೆ.

**ಗೋಽಶ್ವಯುಕ್ತಂ ರಥಂ ಸ್ವಪ್ನೇ ಏಕಾಕೀ ಯೋಽಧಿರೋಹತಿ ॥**
**ತತ್ರಸ್ಥಶ್ಚ ವಿರುಧ್ಯೇತ ಐಶ್ವರ್ಯಂ ಲಭತೇ ನರಃ ।**

ಯಾವಾತನು ಕನಸಿನಲ್ಲಿ ಎತ್ತಿನಗಾಡಿ ಅಥವಾ ಕುದುರೆ ಗಾಡಿಯಲ್ಲಿ ಸವಾರಿ ಮಾಡಿದಂತೆ ಕಾಣುತ್ತಾನೋ ಆತನಿಗೆ ಐಶ್ವರ್ಯ ಲಭಿಸುತ್ತದೆ.

**ಆಸನೇ ಶಯನೇ ಯಾನೇ ಶರೀರೇ ಯಸ್ಯ ವಾಹನೇ ॥೨೪॥**
**ವರ್ತಮಾನೇ ವಿಬುದ್ಧ್ಯೇತ ಐಶ್ವರ್ಯಂ ತಸ್ಯ ನಿರ್ದಿಶೇತ್ ।**

ಯಾವಾತನು ಕನಸಿನಲ್ಲಿ ಆಸನದಲ್ಲಿ ಕೂತು ಅಥವಾ ಮಲಗಿ ಪ್ರಯಾಣಿಸುವುದು ಅಥವಾ ವಾಹನದಲ್ಲಿ ಪ್ರಯಾಣ ಮಾಡುವುದು ಅಥವಾ ಮನುಷ್ಯರಿಂದ ಹೊರಲ್ಪಡುವ ವಾಹನದಲ್ಲಿ ಸಂಚರಿಸಿದಂತೆ ಕಾಣುತ್ತಾನೋ ಆತನಿಗೆ ಕೂಡಲೇ ಐಶ್ವರ್ಯ ಲಭಿಸುವುದು ಸೂಚಿಸುತ್ತದೆ.

**ಆಮಂ ಮಾನುಷಮಾಂಸಂ ತು ಸ್ವಪ್ನಾಂತೇ ಯಸ್ತು ಖಾದತಿ ॥**
**ಪಾದಂ ಭಕ್ಷ್ಯ ಶತಾಧೀಶಃ ಸಹಸ್ರಂ ಬಾಹುಭಕ್ಷಣೇ ।**
**ರಾಜ್ಯಂ ಶತಸಹಸ್ರಂ ವಾ ಲಭತೇ ಶೀರ್ಷಭಕ್ಷಣಾತ್ ॥೨೬॥**

ಯಾವಾತನು ಕನಸಿನಲ್ಲಿ ಮಾಂಸ ತಿನ್ನುವುದನ್ನು ಕಾಣುತ್ತಾನೋ ಅಥವಾ ತನ್ನ ಕಾಲು, ಕೈ, ತಲೆಯನ್ನು ಪ್ರಾಣಿಯಿಂದ ನುಂಗಿದಂತೆ ಕಾಣುತ್ತಾನೋ ಆತನಿಗೆ ವಿಪುಲವಾದ ಧನ ಅಥವಾ ರಾಜ್ಯಪ್ರಾಪ್ತಿ ಆಗುತ್ತದೆ.

**ಯಸ್ತು ಶ್ವೇತೇನ ಸರ್ಪೇಣ ದಂಶ್ಯತೇ ದಕ್ಷಿಣೇ ಭುಜೇ ।**
**ಸಹಸ್ರಂ ಲಭತೇ ಕ್ಷಿಪ್ರಂ ಸಂಪೂರ್ಣೇ ದಶಮೇಽಹನಿ ॥೨೭॥**

ಯಾವಾತನು ಕನಸಿನಲ್ಲಿ ತನ್ನ ಬಲಭುಜವನ್ನು ಬಿಳಿ ಸರ್ಪವು ಕಚ್ಚಿದಂತೆ ಕಾಣುತ್ತಾನೋ ಆತನಿಗೆ ಶೀಘ್ರದಲ್ಲಿಯೇ ವಿಪುಲವಾದ ಧನ ಲಭಿಸುತ್ತದೆ.

**ಕ್ಷೀರಂ ವಾ ಬಹು ಪೀತ್ವಾ ತು ಸ್ವಪ್ನಾಂತೇ ಯಃ ಪ್ರಬುಧ್ಯತೇ ।**
**ವಿಪುಲಾರ್ಥಗತಿಸ್ತಸ್ಯ ಭವತೀಹ ನ ಸಂಶಯಃ ॥೨೮॥**

ಯಾವಾತನು ಸ್ವಪ್ನಾಂತ್ಯದಲ್ಲಿ ತುಂಬಾ ಹಾಲನ್ನು ಕುಡಿದಂತೆ ಕಾಣು ತ್ತಾನೋ ಆತನಿಗೆ ನಿಃಸಂಶಯವಾಗಿ ವಿಪುಲವಾದ ಸಂಪತ್ತು ಲಭಿಸುತ್ತದೆ.

ಸರ್ಪೈಃ ಶ್ವಭಿರ್ವಾ ದಷ್ಟಸ್ಯ ಭವೇದ್ಯಸ್ಯ ನ ಶೋಣಿತವಮ್ ।
ಉತ್ಥಿತಾ ಏವ ಜಾನೀಯಾತ್ಸಂಪದಸ್ತಸ್ಯ ವೈ ಧ್ರುವಮ್ ॥೨೯॥

ಯಾವಾತನು ಕನಸಿನಲ್ಲಿ ಸರ್ಪ ಅಥವಾ ನಾಯಿಯಿಂದ ಕಚ್ಚಲ್ಪಟ್ಟು ರಕ್ತ ಸುರಿದಂತೆ ಕಂಡು ಎಚ್ಚರವಾಗಿ ಏಳುತ್ತಾನೋ ಆತನಿಗೆ ವಿಪುಲವಾದ ಸಂಪತ್ತು ಲಭಿಸುತ್ತದೆ.

ಛಿನ್ನಂ ಯಸ್ಯ ಶಿರಃ ಸ್ವಪ್ನೇ ದೃಶ್ಯತೇ ರುಧಿರಾಪ್ಲುತವಮ್ ।
ಸ ಧನಂ ಲಭತೇ ಕ್ಷಿಪ್ರಮಾರೋಗ್ಯಂಚಾಪಿ ವರ್ಧತೇ ॥೩೦॥

ಯಾವಾತನು ಕನಸಿನಲ್ಲಿ ತನ್ನ ಶಿರಃಚ್ಛೇದನ ಆಗಿ ರಕ್ತಸುರಿದಂತೆ ಕಾಣು ತ್ತಾನೋ ಆತನಿಗೆ ಶೀಘ್ರದಲ್ಲಿಯೇ ಧನ ಲಭಿಸುತ್ತದೆ ಹಾಗೂ ಆರೋಗ್ಯವಂತನು ಆಗುತ್ತಾನೆ.

ತರುಣಂ ಜೀರ್ಣವಸಾತ್ಮಾನಂ ಸ್ವಪ್ನೇ ಯಸ್ತು ಪ್ರಪಶ್ಯತಿ ।
ವೃದ್ಧಿಂ ಚಾಸ್ಯ ವಿಜಾನೀಯಾದಾಯುಷ್ಮಾಂಶ್ಚ ಭವೇನ್ನರಃ ॥೩೧॥

ಯಾವಾತನು ಕನಸಿನಲ್ಲಿ ತನ್ನ ಯೌವನವು ವೃದ್ಧಾಪ್ಯಕ್ಕೆ ಪರಿವರ್ತಿಸಿದಂತೆ ಕಾಣುತ್ತಾನೋ ಆತನು ಅಭಿವೃದ್ಧಿ ಹೊಂದಿ ದೀರ್ಘಾಯುಷ್ಯ ಉಳ್ಳವನು ಆಗುತ್ತಾನೆ.

ಯಸ್ಯಾತ್ಮೀಯಃ ಪ್ರದೇಶಃ ಸ್ಯಾದುಚ್ಛ್ರಿತಧ್ವಜದರ್ಶನವಮ್ ।
ಆತ್ಮನೋ ವಿಜಯಂ ಲಾಭೋ ಧನಾದೀನಾಂ ಚ ಕೀರ್ತ್ಯತೇ॥

ಯಾವಾತನು ಕನಸಿನಲ್ಲಿ ತನ್ನ ಪ್ರದೇಶದಲ್ಲಿ ಧ್ವಜವು ಹಾರುವಂತೆ ಕಾಣು ತ್ತಾನೋ ಆತನಿಗೆ ಜಯಪ್ರಾಪ್ತಿ, ಧನಲಾಭ ಹಾಗೂ ಕೀರ್ತಿ ಲಭಿಸುತ್ತದೆ.

ಜಾತರೂಪಮಯಂ ಛತ್ರಂ ಶ್ವೇತಮಾಲ್ಯವಿಭೂಷಿತವಮ್ ।
ಆಕಾಶಾತ್ತು ಸಮಿಪಸ್ಥಂ ದೃಷ್ಟ್ವಾ ರಾಜ್ಯಮವಾಪ್ನುಯಾತ್ ॥

ಯಾವಾತನು ಕನಸಿನಲ್ಲಿ ಬಿಳಿಮಾಲೆಯಿಂದ ಅಲಂಕೃತ ಕೊಡೆಯು ಆಕಾಶ ದಿಂದ ಬಂದಂತೆ ಕಾಣುತ್ತಾನೋ ಆತನಿಗೆ ರಾಜ್ಯವು ಲಭಿಸುತ್ತದೆ.

ದೇವಾಲಯಂ ಚ ಪ್ರತಿಮಾಂ ಶುಕ್ಲಮಾಲ್ಯವಿಭೂಷಿತಾಮ್ ।
ದೃಷ್ಟ್ವಾ ಸ್ವಪ್ನೇ ಶ್ರಿಯಂ ಸಮ್ಯಕ್ತೇಷಾಮೇವಾಭಿಭಾಷಣಮ್ ॥

ಯಾವಾತನು ಕನಸಿನಲ್ಲಿ ಬಿಳಿಮಾಲೆಯಿಂದ ಅಲಂಕೃತ ಪ್ರತಿಮೆಯುಳ್ಳ ದೇವಸ್ಥಾನವನ್ನು ಕಾಣುತ್ತಾನೋ ಆತನಿಗೆ ಶ್ರೇಯಸ್ಸು ಉಂಟಾಗುತ್ತದೆ.

ವಿಪ್ರಾಣಾಂ ಶುಕ್ಲವಸ್ತ್ರಾಣಾಂ ಶುಕ್ಲಾನಾಂ ಚ ಗವಾಮಪಿ ।
ದರ್ಶನಂ ಚ ಸಕೃತ್ಸ್ವಪ್ನೇ ಕಾರ್ಯಸಿದ್ಧೇಸ್ತು ಲಕ್ಷಣಮ್ ॥೩೫॥

ಯಾವಾತನು ಕನಸಿನಲ್ಲಿ ಬ್ರಾಹ್ಮಣರನ್ನು, ಬಿಳಿವಸ್ತ್ರ, ಬಿಳಿದನ ಕಾಣುತ್ತಾನೋ ಆತನಿಗೆ ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು ಲಭಿಸುತ್ತದೆ.

ಸ್ವರ್ಣಂ ರೂಪ್ಯಂ ಸಿತಾಂಭೋಜ್ಯಂ ಶಸ್ತ್ರಮಾಭರಣಂ ತಥಾ ।
ಪಶ್ಯೇಚ್ಛ್ರಿಯಮವಾಪ್ನೋತಿ ರಾಜ್ಯಂ ಚಾಪಿ ಸಮಶ್ನುತೇ ॥೩೬॥

ಯಾವಾತನು ಕನಸಿನಲ್ಲಿ ಬಂಗಾರ, ಬೆಳ್ಳಿ, ಬಿಳಿ ಕಮಲದ ಹೂ, ಶಸ್ತ್ರ ಅಥವಾ ಆಭರಣಗಳನ್ನು ಪಡೆದಂತೆ ಕಾಣುತ್ತಾನೋ ಆತನಿಗೆ ಶ್ರೇಯಸ್ಸು ಉಂಟಾಗುತ್ತದೆ ಹಾಗೂ ರಾಜ್ಯಪ್ರಾಪ್ತಿ ಆಗುತ್ತದೆ.

ಪೂರ್ಣಂ ಚ ವಿಪುಲಂ ಧಾನ್ಯಂ ಗೃಹಮಗ್ನಿಭಯಂ ತಥಾ । ಶ್ಯಾಮಾ
-ಕಂ ಚೋನ್ನತಾಗಾರಂ ನರೋ ದೃಷ್ಟ್ವಾ ಶ್ರಿಯಂ ಲಭೇತ್ ॥೩೭॥

ಯಾವಾತನು ಕನಸಿನಲ್ಲಿ ವಿಪುಲವಾದ ಧಾನ್ಯದ ಪೂರ್ಣರಾಶಿಯನ್ನು, ಎತ್ತರವಾದ ಪ್ರಾಗಾರ, ಬೆಂಕಿಯಿಂದ ಪೀಡಿತ ಮನೆಯನ್ನು ಕಾಣುತ್ತಾನೋ ಆತನಿಗೆ ಸಂಪತ್ತು ಲಭಿಸುತ್ತದೆ.

ಸೌವರ್ಣಂ ಕೃಮಿಭಿರ್ಗಾತ್ರಂ ಸ್ವಪ್ನೇ ಯಸ್ಯ ವಿಶೀರ್ಯತೇ ।
ಧನಧಾನ್ಯಮವಾಪ್ನೋತಿ ಆರೋಗ್ಯಂ ಚ ಲಭೇನ್ನರಃ ॥೩೮॥

ಯಾವಾತನು ಕನಸಿನಲ್ಲಿ ಬಂಗಾರ ವರ್ಣದ ಕ್ರಿಮಿಯಿಂದ ಪೀಡಿಸಲ್ಪಟ್ಟಂತೆ ಕಾಣುತ್ತಾನೋ ಆತನಿಗೆ ಧನ-ಧಾನ್ಯ ಮತ್ತು ಆರೋಗ್ಯ ಲಭಿಸುತ್ತದೆ.

ಸುವರ್ಣಮಿವ ಚಾತ್ಮಾನಂ ಸ್ವಪ್ನಾಂತೇ ಯಸ್ತು ಪಶ್ಯತಿ ।
ವೃದ್ಧಿಸ್ತಸ್ಯ ವಿಜಾನೀಯಾದಾಯುಷ್ಯಮಾನ್ಯಪ್ಯಸೌ ಭವೇತ್ ॥

ಯಾವಾತನು ಕನಸಿನಲ್ಲಿ ತಾನು ಬಂಗಾರದಂತೆ ಆದದ್ದನ್ನು ಕಾಣುತ್ತಾನೋ ಆತನಿಗೆ ಅಭಿವೃದ್ಧಿ ಮತ್ತು ಆಯುಷ್ಯ ಲಭಿಸುತ್ತದೆ.

ಬೀಜಾನಾಮಂಕುರಾನ್ವಾಪಿ ದೃಷ್ಟ್ವಾ ಧನಮವಾಪ್ನುಯಾತ್ ।
ಶಂಖ ಚಕ್ರಧ್ವಜಾದೀನಿ ತಾಲವೃಂತಂ ಚ ಚಾಮರಮ್ ॥೪೦॥

ಯಾವಾತನು ಕನಸಿನಲ್ಲಿ ಬೀಜ, ಮೊಳೆತ ಬೀಜದ ಅಂಕುರ, ಶಂಖ, ಚಕ್ರ, ಪತಾಕೆ, ಬೀಸಣಿಗೆ ಮತ್ತು ಚಾಮರ ನೋಡುತ್ತಾನೋ ಆತನಿಗೆ ಧನ ಲಭಿಸುತ್ತದೆ.

ರಕ್ತಂ ಕುಂಭಂ ಚ ಸಂಪೂರ್ಣಂ ಪಶ್ಯೇದ್ಧನಮವಾಪ್ನುಯಾತ್ ।
ಶ್ವೇತಂ ಚ ಪಾಯಸಂ ಸಕ್ತು ಕ್ಷೀರಂ ವಾ ಶರ್ಕರಾ ದಧಿ ॥೪೧॥
ಸಾಗರಂ ಚ ನದೀಂ ವಾಪಿ ಪಿಬೇದ್ಧನಸಮಾಗಮಃ ।

ಯಾವಾತನು ಕನಸಿನಲ್ಲಿ ರಕ್ತ, ಜಲಭರಿತ ಪೂರ್ಣಕಲಶವನ್ನು ನೋಡುತ್ತಾನೋ ಆತನಿಗೆ ಧನ ಲಭಿಸುತ್ತದೆ. ಬೆಳ್ಳಿ, ಪಾಯಸ, ಹಿಟ್ಟು, ಹಾಲು, ಸಕ್ಕರೆ, ಮೊಸರು, ಸಮುದ್ರ, ನದಿ ಅಥವಾ ಬಾವಿಯನ್ನು ಕನಸಿನಲ್ಲಿ ನೋಡಿದರೆ ಆತನಿಗೆ ಧನ ಲಭಿಸುತ್ತದೆ.

ಆಮ್ರಾದಿಕಂ ಫಲಂ ವಾಪಿ ಅನ್ನಮಾಮಿಷಮೇವ ಚ ॥೪೨॥
ವೇದಾದಿಪುಣ್ಯಶಬ್ದಾನಾಂ ಶ್ರವಣಂ ಚೇದ್ಧನಾಗಮಃ ।

ಯಾವಾತನು ಕನಸಿನಲ್ಲಿ ಮಾವಿನ ಹಣ್ಣು ಮೊದಲಾದ ಫಲ, ಅನ್ನ, ಮಾಂಸ ಇತ್ಯಾದಿ ನೋಡುತ್ತಾನೋ ಅಥವಾ ವೇದ-ಉಪನಿಷತ್ತು ಇತ್ಯಾದಿ ಪ್ರವಚನ ಕೇಳುತ್ತಾನೋ ಆತನಿಗೆ ಧನ ಲಭಿಸುತ್ತದೆ.

ದೇವದ್ವಿಜಗುರುಪ್ರಾಜ್ಞೈಃ ಸಾಧುಭಿಶ್ಚ ಸಮಾಗಮಃ ॥೪೩॥
ರಕ್ತಾಮಿಷಶಕೃದ್ವಿಷ್ಠಾಂ ಮಜ್ಜನಂ ಭೋಜನಂ ತಥಾ ।
ವರಾಂಗನಾ ಗತಿಶ್ಚಾಪಿ ಸರ್ಪವೃಶ್ಚಿಕದರ್ಶನಮ್ ॥೪೪॥
ದೇವದ್ವಿಜಗುರುಸ್ತ್ರೀಭಿರ್ಭಾಷಣಂ ಚ ಶುಭಂ ವಿದುಃ ।

ಯಾವಾತನು ಕನಸಿನಲ್ಲಿ ದೇವರು, ಬ್ರಾಹ್ಮಣ, ಗುರು, ಪ್ರಾಜ್ಞರು ಅಥವಾ ಸಾಧುಸಂತರೊಂದಿಗೆ ಕೂಡಿದ್ದನ್ನು ಕಾಣುತ್ತಾನೋ ಅಥವಾ ರಕ್ತ, ಮಾಂಸ, ಮಲ ಇವುಗಳನ್ನು ನೋಡುವುದು ಅಥವಾ ಇವುಗಳಲ್ಲಿ ಹೊರಳಾಡಿದಂತೆ ಕಾಣುತ್ತಾನೋ ಮತ್ತು ಭೋಜನ ಮಾಡುವುದು ಕಂಡರೆ ಆತನಿಗೆ ಶುಭ ಫಲ ಲಭಿಸುತ್ತದೆ. ವೇಶ್ಯೆಯನ್ನು ಕೂಡುವುದು, ಹಾವು, ಚೇಳು ಮೊದಲಾದ

ಜಂತುಗಳಿಂದ ಕಡಿಯಲ್ಪಡುವುದು, ದೇವರು, ಬ್ರಾಹ್ಮಣರು, ಗುರು ಅಥವಾ ಹೆಂಗಸಿನೊಂದಿಗೆ ಮಾತಾಡಿದಂತೆ ಕನಸಿನಲ್ಲಿ ಕಂಡು ಬಂದರೆ ಆತನಿಗೆ ಶುಭಫಲ ಲಭಿಸುತ್ತದೆ.

**ಧನಧಾನ್ಯಾದಿಲಾಭಂ ಚ ತಾಂಬೂಲ ಕ್ರಮುಕಾದಿಕಮ್ ॥೪೫॥**
**ಅನ್ನಾಹಾರಂ ತಥಾನ್ನಸ್ಯ ಲಾಭಶ್ಚಾಪಿ ಧನಪ್ರದಃ ।**
**ಆತ್ಮನಶ್ಚಾಭಿಷೇಕಶ್ಚ ಕ್ಷೀರಾದ್ಯೈಃ ಸ್ಯಾದ್ಧನಪ್ರದಃ ॥೪೬॥**

ಯಾವಾತನು ಕನಸಿನಲ್ಲಿ ಧನ-ಧಾನ್ಯ ಇತ್ಯಾದಿ, ತಾಂಬೂಲ, ಪೂಗೀಫಲ, ಸುಪಾರಿ, ಅನ್ನ ಆಹಾರ ಇತ್ಯಾದಿ ಪಡೆದಂತೆ ಅಥವಾ ಅನ್ನ, ಆಹಾರ ಸೇವಿಸಿದಂತೆ ಕಾಣುತ್ತಾನೋ ಅಥವಾ ತಾನು ಹಾಲಿನಿಂದ ಸ್ನಾನ ಮಾಡಿದಂತೆ ಕಂಡು ಬಂದರೆ ಆತನಿಗೆ ಧನಲಾಭ ಆಗುತ್ತದೆ.

**ಶಕಟಂ ಚ ಗಜಾಂಶ್ಚೈವ ಪ್ರಾಸಾದಂ ಶಿವಿಕಾಮಪಿ ।**
**ಫಲಕಂ ರಥಕಂ ವಾಪಿ ಧಿಷ್ಣ್ಯಂ ಚಾರೋಹಯೇದ್ಯದಿ ॥೪೭॥**
**ಧಾನ್ಯಂ ಪ್ರಾಪ್ನೋತಿ ವಿಪುಲಂ ಶುಭಂ ವೃಕ್ಷಾದಿಕಂ ತಥಾ ।**
**ಆತ್ಮನೋ ಬಂಧನಂಚೈವ ಚಾರೋಗ್ಯಪ್ರದಮುಚ್ಯತೇ ॥೪೮॥**

ಯಾವಾತನು ಕನಸಿನಲ್ಲಿ ಗಾಡಿಯಲ್ಲಿ ಡೋಲಿ ಅಥವಾ ಪಲ್ಲಕ್ಕಿಯಲ್ಲಿ ಸವಾರಿ ಮಾಡುವುದು, ಆನೆ ಅಥವಾ ರಥ ಸವಾರಿ, ಅರಮನೆ ಅಥವಾ ದೇವಾಲಯದಲ್ಲಿ ವಾಸ ಮಾಡುವುದು, ಮನೆ, ಡೋಲಿ, ರಥ, ಮರ ಇತ್ಯಾದಿ ಏರುವುದು, ಮತ್ತು ಧಾನ್ಯ ಲಭಿಸಿದರೆ ಅತ್ಯಂತ ಶುಭಫಲ ಲಭಿಸುತ್ತದೆ. ತನ್ನನ್ನು ಬಂಧಿಸಿದಂತೆ ಕಂಡು ಬಂದರೆ ಆರೋಗ್ಯ ಲಭಿಸುತ್ತದೆ.

**ಅಥಾತ್ರಾವಸರೇ ದೃಷ್ಟೇ ದುಸ್ವಪ್ನೇ ಫಲಮುಚ್ಯತೇ ।**
**ಶುನಃ ಸೃಗಾಲಾನ್ ಗೃಧ್ರಾಂಶ್ಚ ಪಿಶಾಚಾನ್ಕೃಷ್ಣಕೀಟಿಕಾನ್ ॥**
**ಸ್ವಪ್ನೇ ತು ಯದಿ ವಿಕ್ಷೇತ ನರಃ ಶೋಕಮವಾಪ್ನುಯಾತ್ ।**

ಯಾವಾತನು ಕನಸಿನಲ್ಲಿ ನಾಯಿ, ನರಿ, ಹದ್ದು, ಪಿಶಾಚ, ಕಪ್ಪು ಬಣ್ಣದ ಕೀಟಗಳನ್ನು ಕಾಣುತ್ತಾನೋ ಆತನು ದುಃಖಿತನು ಆಗುತ್ತಾನೆ.

**ಕಾಕಂ ಗೃಧ್ರಂ ವಟಂ ಶ್ಯೇನಂ ಪಿಶಾಚಂ ವಾಥ ರಾಕ್ಷಸಮ್ ॥**
**ಸತತಂ ಪತಿತಂ ವಾಪಿ ದೃಷ್ಟ್ವಾ ವ್ಯಸನಮಾಪ್ನುಯಾತ್ ।**

ಯಾವಾತನು ಕನಸಿನಲ್ಲಿ ಕಾಗೆ, ಹದ್ದು, ಆಲದ ಮರದಲ್ಲಿ ಮಲಗಿದ ಪಿಶಾಚಿ ಅಥವಾ ರಾಕ್ಷಸನು ನಿರಂತರವಾಗಿ ಬೀಳುತ್ತಾ ಇರುವುದನ್ನು ಕಂಡರೆ ಆತನಿಗೆ ದುಃಖ ಉಂಟಾಗುತ್ತದೆ.

**ಕೃಷ್ಣ ಕೀಟಂ ಚ ಗಾಂ ಕೃಷ್ಣಾಂ ಪಶ್ಯದ್ಭಯಮವಾಪ್ನುಯಾತ್ ॥**
**ಆರೋಹಣಂ ತಥೈತೇಷಾಂ ಸ್ಪರ್ಶಶ್ಚಾಪಿ ಭಯಪ್ರದಃ ।**

ಯಾವಾತನು ಕನಸಿನಲ್ಲಿ ಕಪ್ಪು ಕೀಟಗಳನ್ನು, ಕಪ್ಪು ದನವನ್ನು ಕಾಣುತ್ತಾನೋ ಆತನು ಭಯಾಗ್ರಸ್ಥನು ಆಗುತ್ತಾನೆ. ಅಥವಾ ಅವುಗಳನ್ನು ಏರಿದಂತೆ ಅಥವಾ ಮುಟ್ಟಿದಂತೆ ಕಂಡು ಬಂದರೆ ಆತನು ಭಯಾಗ್ರಸ್ಥನು ಆಗುತ್ತಾನೆ.

**ಅಶ್ವಮುಷ್ಟ್ರಂ ರಥಂ ವಾಪಿ ಮಹಿಷಂ ಶ್ವಾನಮೇವ ಚ ॥೫೨॥**
**ಕೃಷ್ಣಾಸ್ತ್ರಿಯಶ್ಚ ಯಃ ಸ್ವಪ್ನೇ ಪಶ್ಯೇಚ್ಛೋಕಮವಾಪ್ನುಯಾತ್ ।**

ಯಾವಾತನು ಕನಸಿನಲ್ಲಿ ಕುದುರೆ, ಒಂಟೆ, ರಥ, ಕೋಣ, ನಾಯಿ, ಕಪ್ಪು ಬಣ್ಣದ ಹೆಂಗಸು ಕಾಣುತ್ತಾನೋ ಆತನಿಗೆ ದುಃಖ ಉಂಟಾಗುತ್ತದೆ.

**ದೇವತಾ ಯತ್ರ ನೃತ್ಯಂತಿ ಹಸಂತಿ ಚ ರುದಂತಿ ಚ ॥೫೩॥**
**ಆಸ್ಫೋಟಯಂತಿ ಧಾವಂತಿ ಸ ದೇಶಸ್ತು ವಿನಶ್ಯತಿ ।**

ಯಾವಾತನು ಕನಸಿನಲ್ಲಿ ದೇವತೆಗಳು ನರ್ತಿಸುವುದನ್ನು, ನಗುವುದನ್ನು, ಅಳುವುದನ್ನು, ಜಗಳ ಮಾಡುವುದನ್ನು, ಓಡುವುದನ್ನು ಕಾಣುತ್ತಾನೋ ಆತನು ವಾಸಿಸುವ ದೇಶ ಅಥವಾ ಸ್ಥಳದ ಹಾನಿ ಸಂಭವಿಸುತ್ತದೆ.

**ರಕ್ತಾಂಬರಧರಾ ನಾರೀ ರಕ್ತಗಂಧಾನುಲೇಪನಾ ॥೫೪॥**
**ಕಂಬಳಾನ್ರಜತಾಕ್ಷಂಚ ಅಯಃಪಿಂಡಂ ಚ ಕುಂಜರಂ ।**
**ತಿಲಂ ಸೂಕರಮಾರ್ಜಾರೌ ಸ್ವಪ್ನೇ ದೃಷ್ಟ್ವಾ ನರೋ ಮೃತಃ ॥**

ಯಾವಾತನು ಕನಸಿನಲ್ಲಿ ರಕ್ತವರ್ಣದ ವಸ್ತ್ರವನ್ನು ಧರಿಸಿದ ಹಾಗೂ ರಕ್ತ ಚಂದನ ಲೇಪನ ಮಾಡಿದ ಹೆಂಗಸನ್ನು ಕಾಣುತ್ತಾನೋ ಆತನಿಗೆ ಮರಣ ಸೂಚಕ ಆಗಿರುತ್ತದೆ. ಕಂಬಳಿ, ಬೆಳ್ಳಿಯ ಪಾತ್ರೆ, ಕಬ್ಬಿಣ, ಪಿಂಡ, ಎಳ್ಳು, ಹಂದಿ, ಬೆಕ್ಕು ಇವುಗಳನ್ನು ಕನಸಿನಲ್ಲಿ ನೋಡುವುದು ಆತನಿಗೆ ಅವಸಾನ ಸೂಚಕ ಆಗಿರುತ್ತದೆ.

ಉಪಗೂಹತಿ ಯಃ ಸ್ವಪ್ನೇ ಸಾ ರಾತ್ರಿಸ್ತಸ್ಯ ಪಶ್ಚಿಮಾ ।
ರಕ್ತಮಾಲ್ಯಾಂಬರಧರೋ ಯೋ ಗಚ್ಛೇದ್ದಕ್ಷಿಣಾಂ ದಿಶಮ್ ॥
ಕೃಷ್ಣನಾರೀಂ ಕರೇ ಗೃಹ್ಯ ಮರಣಂ ತಸ್ಯ ನಿರ್ದಿಶೇತ್ ।

ಯಾವಾತನು ಕನಸಿನಲ್ಲಿ ರಕ್ತವರ್ಣದ ಮಾಲೆ ಮತ್ತು ವಸ್ತ್ರವನ್ನು ಧರಿಸಿದ ಕಪ್ಪು ಬಣ್ಣದ ಸ್ತ್ರೀಯ ಕೈ ಹಿಡಿದು ದಕ್ಷಿಣ ದಿಕ್ಕಿಗೆ ಹೋಗುವುದನ್ನು ಕಾಣುತ್ತಾನೋ ಆತನಿಗೆ ಆ ಕನಸು ಅವಸಾನವನ್ನು ಸೂಚಿಸುತ್ತದೆ.

ಕಪಿಲಾಮೂರ್ಧ್ವಕೇಶೀಂ ಚ ಸ್ವಪ್ನಾಂತೇ ಯಸ್ತು ಪಶ್ಯತಿ ॥೫೭॥
ಶರೀರಪತನಂ ತಸ್ಯ ಪ್ರಧಾನಪುರುಷಸ್ಯ ವಾ । ಚಂಡಾಲಾನ್ಪತಿ-
ತಾನ್ಮ್ಲೇಚ್ಛಾಂದುರ್ವರ್ಣಾನ್ವಾಯಸಾನಪಿ ॥೫೮॥ ಶ್ವಾಪದಾನ್ಕೃ-
ಷ್ಣಸರ್ಪಾಂಶ್ಚ ದೃಷ್ಟ್ವಾ ಮರಣಮವಾಪ್ನುಯಾತ್ ।

ಯಾವಾತನು ಕನಸಿನಲ್ಲಿ ಮೇಲ್ಗಡೆ ಹಾರುವ ಕೂದಲು ಉಳ್ಳ ಕಪಿಲ ವರ್ಣದ ಸ್ತ್ರೀಯನ್ನು ಕಾಣುತ್ತಾನೋ ಆತನಿಗೆ ಅಥವಾ ಅವನ ಯಜಮಾನನಿಗೆ ಅವಸಾನ ಸೂಚಿಸುತ್ತದೆ. ಕನಸಿನಲ್ಲಿ ಚಂಡಾಲ, ಮ್ಲೇಂಛ, ಹೀನಜಾತಿಯವ, ಕಾಗೆ, ಕ್ರೂರಪ್ರಾಣಿ ಅಥವಾ ಕಪ್ಪು ಸರ್ಪವನ್ನು ಕಾಣುತ್ತಾನೋ ಆತನಿಗೆ ಇದು ಅವಸಾನ ಸೂಚಿಸುತ್ತದೆ.

ಮಧುನಾ ಪಿತಯಾಜ್ಯೇನ ತೈಲೇನಾನ್ಯೇನ ವಾ ಯದಿ ॥೫೯॥
ಅಭ್ಯಜ್ಯ ಯೋ ವಿಬುದ್ಧ್ಯೇತ ರೋಗಂ ತಸ್ಯ ವಿನಿರ್ದಿಶೇತ್ ।

ಯಾವಾತನು ಕನಸಿನಲ್ಲಿ ಜೇನು, ತುಪ್ಪ ಅಥವಾ ಎಣ್ಣೆಯಿಂದ ತನ್ನ ಶರೀರವನ್ನು ಅಭ್ಯಂಜನ ಮಾಡುವುದನ್ನು ಕಾಣುತ್ತಾನೋ ಆ ಕನಸು ಆತನಿಗೆ ರೋಗ ಸೂಚಕ ಆಗಿರುತ್ತದೆ.

ಅಭಿದ್ರವಂತಿ ಯತ್ಸ್ವಪ್ನೇ ದಂಷ್ಟ್ರಿಣಃ ಶೃಂಗಿಣೋಽಪಿ ವಾ ॥೬೦॥
ಶ್ವಾ ನರಾ ವಾ ವರಾಹಾ ವಾ ತಸ್ಯ ಸ್ಯಾದ್ವ್ಯಸನಂ ಮಹತ್ ।

ಯಾವಾತನು ಕನಸಿನಲ್ಲಿ ಹಲ್ಲು ಅಥವಾ ಕೊಂಬುಗಳುಳ್ಳ ಪ್ರಾಣಿಗಳನ್ನು ಎದುರಿಸಿದಂತೆ ಕಂಡು ಬಂದರೆ ಅಥವಾ ಮಂಗ, ಹಂದಿಗಳನ್ನು ಎದುರಿಸಿದಂತೆ ನೋಡಿದರೆ ಆತನಿಗೆ ದುಃಖ ಸಂಭವಿಸುತ್ತದೆ.

**ಪೂರ್ಣಕುಂಭಾದಿನಾಶಂ ಚ ಪಶ್ಯೇಚ್ಛೋಕಮವಾಪ್ನುಯಾತ್ ॥**

ಯಾವಾತನು ಕನಸಿನಲ್ಲಿ ಜಲಭರಿತ ಕಲಶವು ನಾಶವಾಗುವುದನ್ನು ಕಾಣು ತ್ತಾನೋ ಆ ಕನಸು ಆತನಿಗೆ ದುಃಖ ಸೂಚಕ ಆಗಿರುತ್ತದೆ.

**ಆದಿತ್ಯಮಥ ಚಂದ್ರಂ ವಾ ವಿಗತದ್ಯುತಿಕಂ ತಥಾ । ಪತಂತಿ ಭುವಿ ವೇಗೇನ ತಾರಕಾದೀನಿ ವಾ ಯದಿ ॥೬೨॥ ವೀಕ್ಷೇತ ಮಾನವಃ ಸ್ವಪ್ನೇ ಮರಣಂ ಶೋಕಮಾಪ್ನುಯಾತ್ ।**

ಯಾವಾತನು ಕನಸಿನಲ್ಲಿ ಸೂರ್ಯ ಅಥವಾ ಚಂದ್ರನು ಪ್ರಕಾಶವಿಲ್ಲದಂತೆ ಇರುವುದನ್ನು ಕಾಣುತ್ತಾನೋ, ಅಥವಾ ನಕ್ಷತ್ರವು ವೇಗವಾಗಿ ಭೂಮಿಗೆ ಬಿದ್ದಂತೆ ಕಾಣುತ್ತಾನೋ ಆತನಿಗೆ ದುಃಖ ಅಥವಾ ಮರಣ ಸಂಭವಿಸುತ್ತದೆ.

**ನದೀಂ ಶುಷ್ಕಾಂ ಸಮುದ್ರಾಂ ವಾ ಶುಷ್ಕಾಂ ಪುಷ್ಕರಿಣೀಂ ತಥಾ ॥ ಯಶ್ಚಕ್ಷುಷಾ ನರಃ ಪಶ್ಯೇತ್ಸ್ವಪ್ನೇ ತಸ್ಯ ಧನಕ್ಷಯಃ ।**

ಯಾವಾತನು ಕನಸಿನಲ್ಲಿ ನದಿ, ಸಮುದ್ರ ಅಥವಾ ತೀರ್ಥಕ್ಷೇತ್ರದ ನೀರು ಆರಿಹೋದುದನ್ನು ಕಾಣುತ್ತಾನೋ ಆತನ ಧನ-ಸಂಪತ್ತಿನ ಅವನತಿ ಆಗುತ್ತದೆ.

**ಸ್ವಪ್ನೇ ತೈಲಾಭಿಷಿಕ್ತಶ್ಚೇದ್ಧರಿದ್ರಾಲೇಪಿತಸ್ತಥಾ ॥೬೪॥ ಮಹಾವ್ಯಾಧಿಮವಾಪ್ನೋತಿ ಶ್ವಾಂತ್ಯಗೋಭಿಶ್ಚ ಸೀದತಿ ।**

ಯಾವಾತನು ಕನಸಿನಲ್ಲಿ ತನ್ನ ದೇಹವನ್ನು ಎಣ್ಣೆಯಿಂದ, ಹಳದಿಹುಡಿ ಯಿಂದ ಲೇಪಿಸುತ್ತಾನೋ ಅಥವಾ ನಾಯಿ ಮತ್ತು ದನದ ಮೈಲಿಗೆಯಿಂದ ತನ್ನ ದೇಹವನ್ನು ಲೇಪಿಸಿದಂತೆ ಕಾಣುತ್ತಾನೋ ಆತನಿಗೆ ಮಹಾವ್ಯಾಧಿ ಉಂಟಾಗುತ್ತದೆ.

**ದಂತಾ ಯಸ್ಯ ವಿಶೀರ್ಯಂತೇ ಸ್ವಪ್ನೇ ಶಾ ನಿಪತಂತಿ ವಾ ॥೬೫॥ ಸಂತಾಪಂ ಬಂಧುನಾಶಂ ಚ ವ್ಯಸನಂ ಚ ವಿನಿರ್ದಿಶೇತ್ !**

ಯಾವಾತನು ಕನಸಿನಲ್ಲಿ ಹಲ್ಲು ಉದುರುವುದು ಅಥವಾ ಪುಡಿಯಾಗು ವುದು ಕಾಣುತ್ತಾನೋ ಇದು ಆತನಿಗೆ ಸಂತಾಪ, ಬಂಧುನಾಶ ಅಥವಾ ವ್ಯಸನ ವನ್ನು ಸೂಚಿಸುತ್ತದೆ.

**ರಾತ್ರೌ ಪೂರ್ವಾದಿಯಾಮೇಷು ದೃಷ್ಟೇ ಸ್ವಪ್ನೇ ಕ್ರಮಾತ್ಫಲಮ್ ಕರೋತಿ ವರ್ಷಾದ್ವರ್ಷಾರ್ಧಾತ್ತ್ರಿಮಾಸಾನ್ಮಾಸತಸ್ತಥಾ ।**

**ಅರುಣೋದಯವೇಳಾಯಾಂ ದ್ವಾದಶಾಹಾತ್ಫಲಪ್ರದಃ ॥೬೭॥**
**ಗೋವಿಸರ್ಗೇ ಯದಿ ಸ್ವಪ್ನಂ ಸುಮುಹತ್ತ್ರದಹಃ ಫಲಮ್ ।**

ರಾತ್ರಿಮಾನದ ಮೊದಲನೇ ತ್ರಿಭಾಗದಲ್ಲಿ ಬಿದ್ದ ಕನಸು ಒಂದು ವರ್ಷದೊಳಗೆ, ಎರಡನೇ ತ್ರಿಭಾಗದಲ್ಲಿ ಬಿದ್ದ ಕನಸು ಆರು ತಿಂಗಳೊಳಗೆ ಮತ್ತು ಮೂರನೇ ತ್ರಿಭಾಗದಲ್ಲಿ ಬಿದ್ದ ಕನಸು ಒಂದು ತಿಂಗಳೊಳಗೆ ಫಲ ನೀಡುತ್ತದೆ. ಅರುಣೋದಯಕಾಲದಲ್ಲಿ ಕಂಡ ಕನಸು ಹದಿನೆರಡು ದಿನಗಳಲ್ಲಿ ಫಲ ನೀಡುತ್ತದೆ. ಸೂರ್ಯೋದಯಕಾಲದಲ್ಲಿ ಕಂಡಕನಸು ಒಂದು ದಿನದೊಳಗೆ ಫಲ ನೀಡುತ್ತದೆ.

**ಅಶುಭಃ ಪ್ರಾಕ್ಸ್ವಭಃ ಪಶ್ಚ್ಯಾಚ್ಛುಭೋ ವಾ ಪ್ರಾಗಥಾಶುಭಃ ॥**
**ಪಾಶ್ಚಾತ್ಯಫಲದಃ ಸ್ವಪ್ನಃ ತತ್ರ ಪೂರ್ವಸ್ತು ನಿಷ್ಫಲಃ ।**
**ಯತ್ಕಿಂಚಿದಶುಭಂ ದೃಷ್ಟ್ವಾ ತತ ಊರ್ಧ್ವಂ ತು ನ ಸ್ವಪೇತ್ ।**
**ದುಸ್ಸ್ವಪ್ನಂ ಕೀರ್ತಯೇತ್ಸದ್ಯಃ ಸುಸ್ವಪ್ನಂ ನೈವ ಕೀರ್ತಯೇತ್ ॥**

ಮೊದಲು ಅಶುಭಸ್ವಪ್ನ ಬಿದ್ದು ಅನಂತರ ಶುಭಸ್ವಪ್ನ ಬೀಳುವುದು ಅಥವಾ ಮೊದಲು ಶುಭಸ್ವಪ್ನ ಕಂಡು ನಂತರ ಅಶುಭ ಸ್ವಪ್ನ ಬೀಳುವುದು, ಈ ರೀತಿ ಎರಡು ಕನಸು ಬಿದ್ದಾಗ ನಂತರ ಬಿದ್ದ ಕನಸಿನ ಫಲ ಅನುಭವಕ್ಕೆ ಬರುತ್ತದೆ. ಮೊದಲು ಕಂಡ ಕನಸಿನ ಫಲ ನಿಷ್ಫಲ ಆಗುತ್ತದೆ. ಶುಭಕನಸಿನ ವಿಚಾರ ಪ್ರಕಟಗೊಳಿಸಬಾರದು.

---

## ಮೇಳಾ-ಮೇಳಿ

### (ವಧೂವರರ ಜ್ಯೋತಿಷ ಗ್ರಂಥ)

ಜಾತಕ ಘಟನೆಯಲ್ಲಿ ಉಪಯುಕ್ತ ೧೮ ಕೂಟಗಳ ವಿವೇಚನೆ. ಬಲಾಬಲ ಪರಿಶೀಲನೆ. ದಶಾಸಂಧಿ ವಿಚಾರ, ಕುಜದೋಷ ಮತ್ತು ಅಪವಾದ, ಯೋಗಾವಳಿ, ವೈಧವ್ಯಯೋಗ, ವಿವಾಹ ಮುಹೂರ್ತ, ವಿವಾಹ ಕಾಲದ ಗ್ರಹಸ್ಥಿತಿ, ಸಪ್ತಮಭಾವ ವಿಚಾರ, ಕಳತ್ರನಾಶಯೋಗ, ದ್ವಿಭಾರ್ಯಾಯೋಗ, ಪ್ರೇಮ ವಿವಾಹ, ವಿವಾಹಕಾಲ ಋಣಾನು ಬಂಧ, ಇತ್ಯಾದಿ ವಿಚಾರ ಮಾದರಿ ಜಾತಕ ಮತ್ತು ಆಧಾರ ಶ್ಲೋಕಗಳಿಂದ ವಿವರಿಸಿ ಬರೆದಿರುತ್ತದೆ. ವಿವಾಹ ಪ್ರಶ್ನವಿಚಾರ ಪ್ರಶ್ನಮಾರ್ಗ ಗ್ರಂಥದ ಅಧ್ಯಾಯ ೧೬ ಮತ್ತು ೨೦ನ್ನು ಮೂಲಶ್ಲೋಕ ಮತ್ತು ಅನುವಾದವನ್ನು ವಿದ್ಯಾರ್ಥಿಗಳಿಗೆ ಉಪಯುಕ್ತ ಆಗುವಂತೆ ಬರೆದಿರುತ್ತದೆ. ಪರಿಶೋಧಿತ ದ್ವಿತೀಯಾವೃತ್ತಿ.

**ಪುಟಗಳು 147** **ಬೆಲೆ ರೂ. 16-00**

